# ಮಾನಸ

ತಿಂಗಳ ಪತ್ರಿಕೆ ಜೂನ್ 2004
ಸಂಪುಟ 19 ಸಂಚಿಕೆ : 1







**ವಿಳಾಸ**
" **ಮಾನಸ** " ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ - ಪೋಸ್ಟ್
ಬೆಂಗಳೂರು - 560 067



**ಸೂಚನೆ :** ಸೂಚನೆ: ಬಿಡಿಪ್ರತಿ 10-00 ರೂ.
ವಾರ್ಷಿಕ ಚಂದಾ 100-00 ರೂ.
ಸಂಸ್ಥೆಗಳಿಗೆ 150-00 ರೂ.

✹ ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


## ಈ ಸಂಚಿಕೆಯಲ್ಲಿ...



## ಮೈಸೂರು

ಮೈಸೂರಿನಲ್ಲಿರುವ ಓದುಗರು ಮಾನಸ ಪ್ರತಿಗಳಿಗಾಗಿ ಹಾಗೂ ಚಂದಾ ನವೀಕರಣಕ್ಕಾಗಿ ಸಂಪರ್ಕಿಸಿ
**ವೆಂ.ವನಜ : 2329, 12ನೇ ಮೇನ್, 2 ನೇ ಹಂತ ವಿಜಯನಗರ, ಮೈಸೂರು - 570 017**


ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ,
ಪಂಚಾಯಿತಿ ರಸ್ತೆ, ಕಾಡುಗೋಡಿ - ಅಂಚೆ, ಬೆಂಗಳೂರು - 560 067

# ಸಂಪಾದಕೀಯ



ಮೇ 1 ರಂದು ಜಗತ್ತಿನಾದ್ಯಂತ 'ಕಾರ್ಮಿಕ ದಿನಾಚರಣೆ' ಯನ್ನು ಸಂಭ್ರಮದಿಂದ ಆಚರಿಸಲಾಗುತ್ತದೆ. ಬದಲಾಗುತ್ತಿರುವ ಆರ್ಥಿಕ ಸಂದರ್ಭದಲ್ಲಿ ಅಸಂಘಟಿತವಲಯ ದೊಡ್ಡದಾಗುತ್ತಿದೆ. ಈ ವಲಯದ ಕಾರ್ಮಿಕರ ಬಹು ಮುಖ್ಯ ಸಮಸ್ಯೆ ಎಂದರೆ ಉದ್ಯೋಗದ ಅಭದ್ರತೆ. ಅಲ್ಲಿನ ಕಾರ್ಮಿಕರನ್ನು ರಕ್ಷಿಸುವ ಕಾಯ್ದೆಗಳು ಶೀಘ್ರಗತಿಯಲ್ಲಿ ತಿದ್ದುಪಡಿಯಾಗುತ್ತಿರುವುದು ಅವರನ್ನು ಅಭದ್ರತೆಯಿಂದ ಅತಂತ್ರದ ಸ್ಥಿತಿಗೆ ತಳ್ಳುತ್ತಿದೆ. ಉದಾರೀಕರಣ, ಖಾಸಗೀಕರಣ ಹಾಗೂ ಜಾಗತೀಕರಣದ ಹಿನ್ನೆಲೆಯಲ್ಲಿ ಎರಡನೇ ಲೇಬರ್ ಕಮಿಶನ್ ವರದಿಯನ್ನು ಕೂಲಂಕುಶವಾಗಿ ಚರ್ಚಿಸಬೇಕಾಗುತ್ತದೆ. ಇದು ಕಾರ್ಮಿಕರ ಪ್ರತಿಭಟನಾ ಹಕ್ಕನ್ನು ಮೊಟಕುಗೊಳಿಸುವುದರ ಜೊತೆಗೆ, ಸಂಘಟಿತ ಕ್ಷೇತ್ರಗಳನ್ನು ಅಸಂಘಟಿತಗೊಳಿಸುವ, ಅಸಂಘಟಿತ ಕ್ಷೇತ್ರಗಳನ್ನು ನಿರ್ನಾಮಗೊಳಿಸುವ ಪ್ರಕ್ರಿಯೆಯನ್ನು ಕಾಣಬಹುದಾಗಿದೆ. 'ಅಭಿವೃದ್ಧಿ' 'ಪ್ರಗತಿ' ಎಂಬ ಪರಿಕಲ್ಪನೆಗಳು ಬಡವರನ್ನು ನಿರ್ಗತಿಕರನ್ನಾಗಿಸುತ್ತಿದೆ. ಇದಕ್ಕೆಲ್ಲಾ ಕಾರಣ ಕಾರ್ಮಿಕ ಚಳುವಳಿಯ ವೈಫಲ್ಯ ಎನ್ನುವುದಕ್ಕಿಂತ ದುಡಿಮೆ ಮತ್ತು ಕಾರ್ಮಿಕರ ಸಮಸ್ಯೆಯನ್ನು ಲಿಂಗ, ಜಾತಿ, ವರ್ಗ ಇವುಗಳ ಹಿನ್ನೆಲೆಯಲ್ಲೂ ನೋಡಬೇಕಾಗುತ್ತದೆ.

1999ರ ಅಂಕಿ ಅಂಶದ ಪ್ರಕಾರ ಸಂಘಟಿತವಲಯದಲ್ಲಿನ ಮಹಿಳೆಯರ ಸಂಖ್ಯೆ ಕೇವಲ ಶೇ 17. ಕಛೇರಿಯಾಗಲಿ, ಫ್ಯಾಕ್ಟರಿಯಾಗಲಿ, ಹೊಲವಾಗಲಿ, ಮನೆಯಾಗಲಿ ಒಟ್ಟಿನಲ್ಲಿ ಇಡೀ ಜಗತ್ತೆ ಮಹಿಳೆಯರು ಕೆಲಸ ಮಾಡುವ ಸ್ಥಳವಾಗಿದೆ. ಆರ್ಥಿಕ, ಸಾಮಾಜಿಕ ಕಾರಣಗಳಿಗಾಗಿ ಅವರು ಬೇರ್ಪಟ್ಟಿದ್ದಾರೆ. ಕೆಲಸ ಕೆಲವು ಮಹಿಳೆಯರಿಗೆ ಐಡೆಂಟಟಿಗೆ ಸಂಬಂಧಿಸಿದ್ದರೆ ಹಲವರಿಗೆ ಹೊಟ್ಟೆ ಪಾಡಿಗೆ ಸಂಬಂಧಿಸಿದ್ದು. ಲಕ್ಷ ಲಕ್ಷ ಸಂಪಾದಿಸುವ ಕಾರ್ಪೊರೇಟ್ ಕ್ಷೇತ್ರದ ಮಹಿಳೆಯರು ತುದಿಯಲ್ಲಿದ್ದರೆ ಬೆನ್ನು ಬಗ್ಗಿಸಿ ಕಸಗುಡಿಸಿದರೂ ಕನಿಷ್ಟ ಕೂಲಿಸಿಗದಂತಹ ಪೌರಕಾರ್ಮಿಕ ಮಹಿಳೆಯರು ತಳದಲ್ಲಿದ್ದಾರೆ. ಈ ಎರಡೂ ತುದಿಗಳ ನಡುವೆ ಹಲವಾರು ರೀತಿಯ 'ಹುದ್ದೆ' 'ಉದ್ಯೋಗ' 'ಕೆಲಸ' 'ದುಡಿಮೆ' ಮಾಡುವ ಮಹಿಳೆಯರಿದ್ದಾರೆ. ಇತ್ತೀಚೆಗೆಷ್ಟೆ ಅಸಂಘಟಿತ ವಲಯಕ್ಕೆ ಮನೆಗೆಲಸವನ್ನು ಸೇರಿಸಲಾಗಿದೆ. ನಮ್ಮನ್ನೂ ಕಾರ್ಮಿಕರೆಂದು ಪರಿಗಣಿಸಿ, ಪರವಾನಗಿ ನೀಡಿ ಎಂದು ಹೋರಾಡುತ್ತಿರುವ ಲೈಂಗಿಕ ಕಾರ್ಮಿಕರಿದ್ದಾರೆ. ಯಾವ ಬೆಲೆಯೂ, ಘನತೆಯೂ ಇಲ್ಲದೆ ಸದ್ದಿಲ್ಲದೆ ದುಡಿದು ಸವೆಯುವ ಮಹಿಳೆಯರೂ ಇದ್ದಾರೆ.

ಎಲ್ಲವನ್ನು 'ದರಪಟ್ಟಿ' ಹೊತ್ತ ಸರಕಾಗಿಸುವ ಮಾರುಕಟ್ಟೆ ಸಂಸ್ಕೃತಿಯಲ್ಲಿ ಎಲ್ಲವನ್ನು 'ಉಪಭೋಗಿ'ಸಲು ಪ್ರೇರೇಪಿಸುವ ಕೊಳ್ಳುಬಾಕ ಸಂಸ್ಕೃತಿಯಲ್ಲಿ, 'ಕಷ್ಟಪಟ್ಟರೆ ಫಲವುಂಟು' 'ಕೈ ಕೆಸರಾದರೆ ಬಾಯಿ ಮೊಸರು' ಎಂಬ ಮಾತುಗಳು ಅಪರಿಚಿತ ಶಬ್ದಗಳಂತಿವೆ. ದುಡಿಯುವವರಿಗೆ ನಿಜವಾಗಿಯೂ ಫಲಸಿಗುತ್ತಿದೆಯೇ ? ಕೈ ಕೆಸರಾದವರ ಬಾಯಿಗಿರಲಿ ಮೂಗಿಗಾದರೂ ಮೊಸರಿನ ವಾಸನೆ ಸಿಗುತ್ತಿದೆಯೆ ?

ತಾರತಮ್ಯದ ಕಂದರಗಳನ್ನು ಮುಚ್ಚುವ ಬಗೆ ಹೇಗೆ? ಈ ಪ್ರಶ್ನೆಯ ಉತ್ತರಕ್ಕೆ ಫಲಾನುಭಾವಿಗಳೆಲ್ಲರು ಪ್ರಯತ್ನಿಸಬೇಕು. ಉತ್ತರ ಸಂಬಳ, ಬೋನಸ್, ಭತ್ಯೆ, ಟಿ.ಎ.ಹೆಚ್ಚಾಗುತ್ತಿದ್ದ ಹಾಗೆಯೆ ಮನೆಗೆಲಸ ಮಾಡುವವರ ಸಂಬಳ, ಬೋನಸ್ ಭತ್ಯೆ ಟಿ.ಎ. ಹೆಚ್ಚಿಸ ಬೇಕೆಂಬ ಮನಸ್ಥಿತಿಯಲ್ಲಿ ಉತ್ತರವಿದೆ. ಲಿಂಗ, ಜಾತಿ, ವರ್ಗ ತಾರತಮ್ಯದ ವಿರುದ್ಧ ಸಮಾನತೆಗಾಗಿ ಹೋರಾಡುತ್ತಿರುವವರ ಸಂಘಟಿತ ಪ್ರಯತ್ನದಲ್ಲಿದೆ. ಮನುಷ್ಯರ ದುಡಿತದ ಬೆಲೆ, ಮಾನವ ಸಂಬಂಧಗಳ ನೆಲೆಯನ್ನು ಅರ್ಥ ಮಾಡಿಕೊಳ್ಳುವ ಉದ್ದೇಶ, ಬಗೆಗಳು, ಆಯಾಮಗಳನ್ನು ಮರುಚಿಂತಿಸಬೇಕಿದೆ. ಎಲ್ಲಾ ದುಡಿಮೆಗೂ ಸಿಗಬೇಕಾದ ಬೆಲೆ, ಘನತೆ ಸಿಗಬೇಕಾದರೆ ಕಾನೂನು, ಸಂಬಳದಾಚೆಗೂ ನೋಡಬೇಕಾದ ಅಥವಾ ಕಾನೂನು, ಸಂಬಳದ ಅರ್ಥ ವಿಸ್ತರಿಸುವ ಅಗತ್ಯವಿದೆ. ಆಗಷ್ಟೆ ಕಾಯಕವೇ ಕೈಲಾಸವಾಗುವತ್ತ ಹೆಜ್ಜೆ ಇಡಬಹುದು.

- ಸಂಪಾದಕೀಯ ಮಂಡಳಿ

# ಕಸಬಾಚಿ ಕಸವಾದೋರು



ಕನಿಷ್ಟ ವೇತನ ಹಾಗು ಉತ್ತಮ ಕೆಲಸದ ಪರಿಸ್ಥಿತಿಗಾಗಿ ಬೆಂ.ಮ.ಪಾ.ಗುತ್ತಿಗೆ ಪೌರಕಾರ್ಮಿಕರ ಸಂಘವು ಕಳೆದ 4 ವರ್ಷಗಳಿಂದ ತೀವ್ರವಾಗಿ ಹೋರಾಡುತ್ತಿದೆ. ಸಂಘವು ಹಲವಾರು ಬಾರಿ ಧರಣಿ, ಪ್ರತಿಭಟನಾ ಮೆರವಣಿಗೆಗಳನ್ನಲ್ಲದೆ ಪಾಲಿಕೆಯ ಅಧಿಕಾರಿಗಳೂ, ಕಾರ್ಮಿಕ ಇಲಾಖೆಯ ಅಧಿಕಾರಿಗಳೊಂದಿಗೆ ನಿರಂತರ ಮಾತುಕತೆ ನಡೆಸಿದೆ. ಸಾರ್ವಜನಿಕ ಸಭೆಗಳನ್ನು, ಪ್ರತಿಕಾಗೋಷ್ಠಿಗಳನ್ನು ಹಮ್ಮಿಕೊಂಡಿದ್ದಲ್ಲದೆ ಇತರೆ ಚಟುವಟಿಕೆಗಳ ಮೂಲಕ ಕಾರ್ಮಿಕರ ಬೇಡಿಕೆಗಳಿಗಾಗಿ ಒತ್ತಾಯಿಸುತ್ತಿದೆ. ನಿರಂತರ ಹೋರಾಟದ ಫಲವಾಗಿ ಕಾರ್ಮಿಕ ಆಯುಕ್ತರು ದಿನಾಂಕ 16.8.2002 No CLA / CR 34/2001/02 ರ ಗೆಜೆಟ್‌ನಲ್ಲಿ, ಈ ಹಿಂದೆ ಕನಿಷ್ಟ ವೇತನದಡಿ ಬರದಿದ್ದ ಎಲ್ಲಾ ರೀತಿಯ ಕೆಲಸಗಳಿಗೂ ಕನಿಷ್ಟ ವೇತನವನ್ನು ಘೋಷಿಸಿದರು. ಆ ಪ್ರಕಾರ ಗುತ್ತಿಗೆ ಪೌರಕಾರ್ಮಿಕರಿಗೆ (ಮಹಿಳೆ, ಪುರುಷರಿಗೆ ಸಮನಾಗಿ) ನಿಗದಿ ಪಡಿಸಿರುವ ಕನಿಷ್ಟ ವೇತನ ತಿಂಗಳಿಗೆ ರೂ 1800/- ಗುತ್ತಿಗೆ ಪೌರಕಾರ್ಮಿಕರಿಗಷ್ಟೇ ಅಲ್ಲದೆ, ರಾಜ್ಯಾದ್ಯಂತ ಕನಿಷ್ಟ ವೇತನವಿಲ್ಲದ ಎಲ್ಲಾ ಕೆಲಸಗಳಿಗೂ ಕನಿಷ್ಟ ವೇತನ ನಿಗದಿಯಾಗುವಂತೆ ಮಾಡುವ ಮೂಲಕ ಅನಕ್ಷರಸ್ಥ ಗುತ್ತಿಗೆ ಪೌರಕಾರ್ಮಿಕರು ಅಸಂಘಟಿತ ಕ್ಷೇತ್ರದಲ್ಲಿ ಹೊಸ ಇತಿಹಾಸವನ್ನೆ ಬರೆದಿದ್ದಾರೆ.

ಮೇಲಿನ ನೋಟಿಫಿಕೇಶನ್‌ಗನುಗುಣವಾಗಿ ಬೆಂಗಳೂರು ಮಹಾನಗರ ಪಾಲಿಕೆಯು ಸ್ವಚ್ಛತೆಯ ಕೆಲಸಕ್ಕಾಗಿ ಹಿಂದಿದ್ದ ಗುತ್ತಿಗೆಯನ್ನು ರದ್ದು ಪಡಿಸಿ, ಹೊಸ ಟೆಂಡರ್‌ಗಳನ್ನು ಕರೆಯಲು ನಿರ್ಧರಿಸಿತು. ಹೊಸ ಟೆಂಡರ್ ನಿಯಮಗಳಲ್ಲಿ ಎಲ್ಲಾ ಕಾರ್ಮಿಕರಿಗೂ ತಿಂಗಳಿಗೆ ಕೊಡಬೇಕಾದ ಕನಿಷ್ಠ ವೇತನ ರೂ 1800/- ಎಂದು ಸ್ಪಷ್ಟ ಪಡಿಸಲಾಗಿದೆ. ಇದಲ್ಲದೆ ಗುತ್ತಿಗೆ ಕಾರ್ಮಿಕ ಕಾಯ್ದೆಗನುಗುಣವಾಗಿ ವೈದ್ಯಕೀಯ ಸೌಲಭ್ಯ, ಭವಿಷ್ಯ ನಿಧಿ, ವಾರದ ರಜೆ ಹಾಗು ಇತರೆ ಸೌಲಭ್ಯಗಳನ್ನು ನಮೂದಿಸಲಾಗಿದೆ. ಈ ನಿಯಮಗಳನ್ನೊಳಗೊಂಡ ಹೊಸ ಟೆಂಡರ್ ಅನ್ನು ಗುತ್ತಿಗೆದಾರರಿಗೆ ನೀಡಲಾಯಿತು. ಸೂಕ್ತ ಅವಕಾಶ ನೀಡಿಲ್ಲವೆಂದು ಹಾಗು ಹೊಸ ಟೆಂಡರ್ ನಿಯಮಗಳು ಸರಿಯಿಲ್ಲವೆಂದು ಆಗಿನ ಗುತ್ತಿಗೆದಾರು ಹೈಕೋರ್ಟಿಗೆ ಮನವಿ ಸಲ್ಲಿಸಿದರು. ಆದರೆ ಹೈಕೊರ್ಟು ಗುತ್ತಿಗೆದಾರರ ಮನವಿಯನ್ನು ತಿರಸ್ಕರಿಸಿ, ಟೆಂಡರ್ ನಿಯಮಗಳು ಸರಿ ಎಂದು ದಿನಾಂಕ 4/5/2002 ರಂದು ತೀರ್ಪು ನೀಡಿತು. ಮೇ 19 ರಿಂದಲೇ ಜಾರಿಗೊಳಿಸ ಬೇಕೆಂದು ಪಾಲಿಕೆಗೆ ಆದೇಶ ನೀಡಿತು. ಅಲ್ಲದೆ ಕನಿಷ್ಟ ವೇತನ ರೂ 1800/- ಸೇರಿದಂತೆ ಹೊಸ ಟೆಂಡರ್ ನಿಯಮಗಳು ಜಾರಿಯಾಗಬೇಕೆಂಬ ಸರ್ಕಾರಿ ಆಜ್ಞೆಗೂ ಸಹಿ ಬಿತ್ತು. ಆ ಪ್ರಕಾರ ಗುತ್ತಿಗೆ ಪೌರಕಾರ್ಮಿಕರಿಗೆ ಜುಲೈ ತಿಂಗಳಿನಿಂದಲೇ ಕನಿಷ್ಟ ವೇತನ ಸಿಗಬೇಕಿತ್ತು. ಆದರೆ ಹೊಸ ಸಂಬಳ ಸಿಕ್ಕಿದ್ದು ಆಗಸ್ಟ್ ತಿಂಗಳಿನಿಂದ, ಅದೂ ಸಹ ಕನಿಷ್ಟ ವೇತನಕ್ಕಿಂತ ಕಡಿಮೆ. ಕೆಲಸದ ಹೊರೆ, ಕೆಲಸದ ಅವಧಿ ಮಾತ್ರ ಹೆಚ್ಚಾಯಿತು. ಕಾರ್ಮಿಕರ ಸಂಖ್ಯೆಯನ್ನು ಕಡಿಮೆ ಮಾಡಲಾಯಿತು.

ಹೊಸ ಟೆಂಡರ್ ನಿಯಮಗಳು ಜಾರಿಗೊಂಡ ನಂತರದ ಕಾರ್ಮಿಕರ ಪರಿಸ್ಥಿತಿ ಏನೆಂದು ತಿಳಿಯಲು ಬೆಂಬಲ ಗುಂಪಿನವರು 25 ವಾರ್ಡ್‌ಗಳಿಗೆ ಭೇಟಿ ನೀಡಿ ಇನ್ನೂರಕ್ಕೂ ಹೆಚ್ಚಿನ ಕಾರ್ಮಿಕರನ್ನು, ಕೆಲವು ಪಾಲಿಕೆಯ ಸದಸ್ಯರನ್ನು, ಗುತ್ತಿಗೆದಾರರನ್ನು ಮಾತನಾಡಿಸಿ ವರದಿಯನ್ನು ತಯಾರಿಸಿದ್ದರು. ವರದಿಯನ್ನು ಹಾಗು ಜನತಾ ನ್ಯಾಯಾಲಯದ ವರದಿಯನ್ನು ಸಂಕ್ಷಿಪ್ತಗೊಳಿಸಿ ಇಲ್ಲಿ ಪ್ರಕಟಿಸಲಾಗಿದೆ.

**ಹೊಸ ಗುತ್ತಿಗೆ :**

ಹೊಸ ಗುತ್ತಿಗೆ ನಿಯಮದ ಕಲಂ 6,7,8,9,22,26,2.14 ರ ಪ್ರಕಾರ ಕಾರ್ಮಿಕರಿಗೆ ಕನಿಷ್ಟ ವೇತನ ರೂ 1800/- ನೀಡಬೇಕು, ಅಪಘಾತವಾದಲ್ಲಿ ವೈದ್ಯಕೀಯ ನೆರವು ನೀಡಬೇಕು, ಸಾವು ಸಂಭವಿಸಿದರೆ ಪರಿಹಾರ ನೀಡಬೇಕು, ಪ್ರಥಮ ಚಿಕಿತ್ಸಾ ಸೌಲಭ್ಯವಿರಬೇಕು, ಸುರಕ್ಷಾ ಸಲಕರಣೆಗಳನ್ನು ನೀಡಬೇಕು. ಸ್ವಚ್ಛವಾದ ಕುಡಿಯುವ ನೀರಿನ ವ್ಯವಸ್ಥೆ ಇರಬೇಕು. ಶೌಚಾಲಯವಿರಬೇಕು,ಹಾಜರಾತಿ ಸ್ಥಳವಿರಬೇಕು ನಿಗದಿತ ದಿನದಂದು ನಿಗದಿತ ಸ್ಥಳದಲ್ಲಿ, ಪಾಲಿಕೆಯ ಅಧಿಕಾರಿಗಳೆದುರಿನಲ್ಲಿ ವೇತನ ಪಾವತಿಸಬೇಕು. ರಾತ್ರಿ ಪಾಳಿಯ ಕೆಲಸವನ್ನು 7 ರಿಂದ 11.30 ರವರೆಗೂ ಮಾಡಬೇಕು. ಇವು ಪುಸ್ತಕದಲ್ಲಿನ ನಿಯಮಗಳು! ನಿಜಸ್ಥಿತಿ ಏನೆಂದರೆ ಹೊಸ ಟೆಂಡರ್ ನಿಯಮಗಳು ಬಂದ ಮೇಲೆ ಬಹು ಪಾಲು ಕಾರ್ಮಿಕರಿಗೆ ಸಿಗುತ್ತಿರುವ ವೇತನ ತಿಂಗಳಿಗೆ ಗಂಡಸರಿಗೆ ರೂ 1500/- ಹೆಂಗಸರಿಗೆ ರೂ 1300/- ಎಂದು ಕಾರ್ಮಿಕರು ಹೇಳಿದರು. ಕೆಲವು ವಾರ್ಡುಗಳಲ್ಲಿ ಈಗಲೂ (56,57,58,59,34,35) ಹಳೆಯ ಸಂಬಳ 1000-1100 ರೂಗಳೇ ಸಿಗುತ್ತಿದೆ. ಕೆಲವು ವಾರ್ಡುಗಳಲ್ಲಿ ಹಳೆಯ ಸಂಬಳವನ್ನು ತೆಗೆದುಕೊಳ್ಳಲು ಕಾರ್ಮಿಕರು ನಿರಾಕರಿಸಿದಾಗ, ಗುತ್ತಿಗೆದಾರರು ಅವರನ್ನು ಕೆಲಸದಿಂದ ತೆಗೆಯುವುದಾಗಿ ಬೆದರಿಸಿದ್ದಲ್ಲದೆ, ನಿಗದಿಯಾಗಿರುವ ವೇತನವನ್ನು ಕೊಡಿಸಲು ಪಾಲಿಕೆಗೂ ಸಾಧ್ಯವಿಲ್ಲವೆಂದು ಹೇಳಿದ್ದಾರೆ. ಒಂದು ವಾರ್ಡಿನಲ್ಲಿ ಕೇವಲ ಒಂಭತ್ತು ಜನರಿದ್ದರೆ ಮಾತ್ರ ರೂ 1800/- ವೇತನ ಕೊಡಲು ಸಾಧ್ಯವೆಂದು ಗುತ್ತಿಗೆದಾರರು ಹೇಳಿದ್ದಾರೆ. ಹೊಸ ಟೆಂಡರ್ ನಿಯಮಗಳು ಜಾರಿಗೆ ಬರುವ ಮೊದಲು ಪ್ರತಿ ವಾರ್ಡಿನಲ್ಲಿ ಸರಾಸರಿ 40 ಜನ ಕಾರ್ಮಿಕರಿದ್ದರು. ಈಗ ಅರ್ದಕ್ಕರ್ದ ಕಡಿಮೆ ಮಾಡಲಾಗಿದೆ. ಸಂಬಳವಿಲ್ಲದೆ ಜೀವನ ನಡೆಸುವುದೆ ಕಷ್ಟವಾಗುವುದರಿಂದ ಕೊಟ್ಟಷ್ಟೆ ಸಂಬಳವನ್ನು ತೆಗೆದುಕೊಳ್ಳುವಂತಾಗಿದೆ.

ಬನಶಂಕರಿ ವಾರ್ಡಿನ ಗುತ್ತಿಗೆದಾರರನ್ನು ಮಾತನಾಡಿಸಿದಾಗ ಅವರು, ತಮ್ಮ ವಾರ್ಡಿನಲ್ಲಿ 1600/- ರೂ ನೀಡುತ್ತಿರುವುದಾಗಿಯೂ, ಅಪಘಾತವಾದರೆ ವೈದ್ಯಕೀಯ ಸೌಲಭ್ಯವನ್ನು ಒದಗಿಸುತ್ತಿರುವುದಾಗಿಯೂ ಹೇಳಿದರು. ಆದರೆ ಅಲ್ಲಿ ಲಾರಿಗೆ ಕಸ ಹಾಕಿ, ಸಾಗಿಸುವವರಿಗೆ ಮಾತ್ರ ರೂ 1600/- ವೇತನ ಸಿಗುತ್ತಿದೆ.

"ನಿಯಮಗಳನ್ನು ಪಾಲಿಕೆಯು ಸರಿಯಾಗಿ ಜಾರಿಗೆ ತರಬೇಕು. ನಮಗೂ ತೊಂದರೆಯಿದೆ. ಟೆಂಡರ್ ಕರೆದಾಗ ಡೀಸಲ್ ಬೆಲೆ ಕಮ್ಮಿ ಇತ್ತು ಈಗ 6 ರೂ ನಷ್ಟು ಹೆಚ್ಚಾಗಿದೆ. ಕಸ ಸುರಿಯಲು ನಗರದಿಂದ ಹೊರಗೆ ಕನಿಷ್ಟ 30 ಕಿ.ಮೀ ಗಿಂತ ದೂರ ಹೋಗಬೇಕು. ಈ ಸಲ ನಮ್ಮ ಹೂಡಿಕೆಯ ಮೊತ್ತವೂ ಹೆಚ್ಚಾಗಿದೆ. ಕೆಲಸ ಚೆನ್ನಾಗಿ ನಡೆಯುತ್ತಿದೆ. ಚುನಾಯಿತ ಪ್ರತಿನಿಧಿಗಳ ಮೂಗು ತೂರಿಸುವಿಕೆ ಹೆಚ್ಚಾಗಿರುವುದರಿಂದ ಮತ್ತು ಬಹುಪಾಲು ಗುತ್ತಿಗೆಯನ್ನು ಕೆಲವರೇ ತೆಗೆದುಕೊಳ್ಳುವುದರಿಂದ ನಿಯಮಗಳು ಸರಿಯಾಗಿ ಜಾರಿಯಾಗುವುದಿಲ್ಲ" ವೆಂದು ಹೇಳಿದರು.

ಕಾರ್ಪೊರೇಟರೊಬ್ಬರನ್ನು ಭೇಟಿಯಾದಾಗ ಅವರು "ಸಂಬಳ ಜಾಸ್ತಿ ಮಾಡಿದ್ದೇವೆ ಆದರೆ ಕೆಲಸ ಮಾತ್ರ ಸರಿಯಾಗಿ ಮಾಡುವುದಿಲ್ಲ ತರುಣರು, ಆರೋಗ್ಯವಂತರನ್ನು ತೆಗೆದುಕೊಂಡು ಹೆಚ್ಚು ಪ್ರೊಫೆಷನಲ್ ಆಗಿ ಕೆಲಸ ಮಾಡಿಸಬೇಕು" ಎಂದರು. ಹಾಗಾದರೆ ಸಂಬಳವನ್ನು ತಕ್ಕನಾಗಿ ಕೊಡ ಬೇಕಲ್ಲವೆ ಎಂದು ಕೇಳಿದಾಗ "2 ಲಕ್ಷ ಖರ್ಚಾಗುವಂತ ಕೆಲಸವನ್ನು 1.50 ಲಕ್ಷ ನಮೂದಿಸುವರಿಗೆ ನೀಡಿ ಸಂಬಳ ಹೆಚ್ಚು ನೀಡಿ ಎಂದು ಹೇಳಲು ಹೇಗೆ ಸಾಧ್ಯ ?" ಎಂದು ಹೇಳಿದರು.

ವೇತನ ಪಾವತಿಸಲು ನಿಗದಿತ ದಿನಾಂಕವೆಂಬುದೇ ಇಲ್ಲ, 10 ನೇ ತಾರೀಖಿನಿಂದ 15ನೇ ತಾರೀಖಿನೊಳಗೆ ಎಂದಾದರೂ ಪಾವತಿಸುತ್ತಾರೆ. ವೇತನ ಪಾವತಿಸಲು ನಿಗಧಿತ ಸ್ಥಳವೆಂಬುದಿಲ್ಲ. ಸಾಮಾನ್ಯವಾಗಿ ಗುತ್ತಿಗೆದಾರರ ಕಡೆಯ ಮೇಸ್ತ್ರಿಯು ಕೆಲಸ ಮಾಡುತ್ತಿರುವಾಗ ಸಂಬಳವನ್ನು ಕೊಡುತ್ತಾರೆ. ಸಂಬಳ ಪಾವತಿಯ ದಿವಸ ಪಾಲಿಕೆಯ ಅಧಿಕಾರಿಗಳಾಗಲಿ, ಕಾರ್ಮಿಕ ಇಲಾಖೆಯ ಅಧಿಕಾರಿಗಳಾಗಲಿ ಬರುವುದಿಲ್ಲವೆಂದು ಕಾರ್ಮಿಕರು ಹೇಳಿದರು. ದಿನಕ್ಕೆ ಮೂರು ಬಾರಿ ಹಾಕುವ ಹಾಜರಾತಿ ಸಮಯದಲ್ಲಿ ಗುತ್ತಿಗೆದಾರರ ಕಡೆಯ, ಪಾಲಿಕೆ ಕಡೆಯ ಮೇಸ್ತ್ರಿಗಳಿರುತ್ತಾರೆ ಎಂದು ಹೇಳಿದರು. 'ವೇತನವನ್ನು ಪಾಲಿಕೆಯ ಅಧಿಕಾರಿಗಳ ಸಮಕ್ಷಮ ಪಾವತಿ ಸತಕ್ಕದ್ದು' ಎಂದು ಭಾಗ 9 ರ ಕಲಂ 9ರಲ್ಲಿ ಸ್ಪಷ್ಟ ಪಡಿಸಲಾಗಿದೆ.

ನೀಡುವ ಸಂಬಳದಲ್ಲಿ ಕಡಿತ ಮಾತ್ರ ತಪ್ಪುವುದಿಲ್ಲ, ರಜೆ ಹಾಕಿದರೆ ದಿನವೊಂದಕ್ಕೆ ರೂ 50, ಮಮ್ಟಿ ಮುರಿದರೆ ಅದು ಎಷ್ಟು ಹಳೆಯದೆಂದು ಕೂಡ ನೋಡದೆ 100 ರೂ ದಂಡ ಹಾಕಲಾಗುತ್ತದೆ. ತಳ್ಳುವ ಗಂಟೆಗಾಡಿ ಕೆಟ್ಟರೆ ಕಾರ್ಮಿಕರೇ ರಿಪೇರಿ ಮಾಡಿಸಿಕೊಳ್ಳಬೇಕು. ಚಕ್ರಕ್ಕೆ ಎಣ್ಣೆ ಅವರೇ ಹಾಕಿಸಿಕೊಳ್ಳಬೇಕು. ಪೊರಕೆ ಬೇಗ ಸವೆಯುವುದರಿಂದ ಬಗ್ಗಿ ಗುಡಿಸಲು ಕಷ್ಟವಾಗುತ್ತದೆ. ಕೇಳಿದರೆ ಹೊಸ ಪೊರಕೆ ಕೊಡುವುದಿಲ್ಲ ಪೊರಕೆಗೆಂದು ನಾವೇ ತಿಂಗಳಿಗೆ 10 ರೂ ಖರ್ಚು ಮಾಡುತ್ತೇವೆ ಎಂದು ಕಾರ್ಮಿಕರು ಹೇಳಿದರು. ಆದರೆ ಈ ಯಾವ ಕಡಿತ, ದಂಡವನ್ನು

ಕುರಿತು ಟೆಂಡರ್ ನಿಯಮಗಳಲ್ಲಿ ಹೇಳಿಲ್ಲ.

ಯಾವ ಗುತ್ತಿಗೆ ಪೌರ ಕಾರ್ಮಿಕರಿಗೂ ಪಿ.ಎಫ್ ಅಥವಾ ಇ.ಎಸ್.ಐ ಸೌಲಭ್ಯವಾಗಲಿ ದೊರೆತಿಲ್ಲ. ವೈದಕೀಯ ಸೌಲಭ್ಯವಿಲ್ಲ ಶೌಚಾಲಯವಾಗಲಿ, ವಿರಮಿಸುವ ಸ್ಥಳವಾಗಲಿ, ಕುಡಿಯುವ ನೀರಿನ ವ್ಯವಸ್ಥೆಯಾಗಲಿ ಇಲ್ಲ. ಕೆಲವೆಡೆ ಗುಂಪು ವಿಮೆ ಮಾಡಿಸಲಾಗುತ್ತಿದೆ ಎಂದು ತಿಳಿಯಿತು.

ಕಾರ್ಮಿಕರಿಗೆ ಸಂಬಳ ಸಹಿತ ರಜೆಯೇ ಇಲ್ಲ. ವಾರದ ರಜೆಯೂ ಇಲ್ಲ, ಯಾವ ಹಬ್ಬಕ್ಕೂ ರಜೆಯಿಲ್ಲ. ಭಾನುವಾರ ಹಾಗು ಬುಧುವಾರದಂದು ಅರ್ಧ ದಿನದ ಕೆಲಸ. ಹೊಸ ಟೆಂಡರ್ ನಿಯಮಗಳಲ್ಲಿ ತಿಳಿಸಿರುವ ಗಂಬೂಟ್‌ಗಳಾಗಲಿ, ಮಾಸ್ಕ್, ಗ್ಲೌಸುಗಳಾಗಲಿ ಕಾರ್ಮಿಕರಿಗೆ ಸಿಕ್ಕಿಲ್ಲ. ದೊರೆತಿರುವ ಒಂದೇ ಸೌಲಭ್ಯವೆಂದರೆ ಸ್ವಚ್ಛ ಬೆಂಗಳೂರೆಂದು ಬರೆದಿರುವ ಹಸಿರು ಕೋಟು, ಇದರಿಂದ ಬಟ್ಟೆ ಕೊಳೆಯಾಗುವುದು ತಪ್ಪಿದೆ.

ಮಾಮೂಲಿಯಾಗಿ ಕೆಲಸದ ವೇಳೆ ಬೆಳಗ್ಗೆ 6.30 ರಿಂದ ಮಧ್ಯಾಹ್ನ 2 ರವರೆಗೆ ಇರುತ್ತದೆ. ಬುಧುವಾರ ಹಾಗು ಭಾನುವಾರದಂದು ಅರ್ಧ ದಿವಸದ ಕೆಲಸವಿರುತ್ತದೆ. ಆ ದಿನಗಳಲ್ಲಿ 11 ಗಂಟೆಯವರೆಗೂ ಕೆಲಸ ಮಾಡುತ್ತಾರೆ. ಊಟದ ವಿರಾಮ ಸಾಮಾನ್ಯವಾಗಿ 10.30 ರಿಂದ 11 ರವರೆಗೆ. ಹಲವು ಸಲ 12 ಗಂಟೆಯಾದರೂ ಊಟಕ್ಕೆ ಬಿಡುವುದಿಲ್ಲವೆಂದು ಕಾರ್ಮಿಕರು ಹೇಳಿದರು. ಗುಡಿಸಿಕೊಂಡು ದೂರ ಹೋಗಿರುತ್ತಾರೆ ವಾಪಸ್ಸು ಬಂದು ಹಾಜರಾತಿ ನೀಡುವ ವೇಳೆಗೆ ಅರ್ಧ ಗಂಟೆ ಮುಗಿದೇ ಹೋಗಿರುತ್ತದೆ. ಬನ್ನೊ , ಬ್ರೆಡ್ಡೊ ತೆಗೆದುಕೊಂಡು ತಿನ್ನುತ್ತಲೆ ಕೆಲಸ ಮಾಡುತ್ತೇವೆಂದರು. ಈ ರೀತಿ ಲೆಕ್ಕ ಹಾಕಿದರೆ ಅವರು ಕೆಲಸ ಮಾಡುವುದು ವಿರಾಮದ ವೇಳೆ ಹೊರತು ಪಡಿಸಿ ವಾರಕ್ಕೆ 44 ಗಂಟೆಗಳ ಕಾಲ.

ಬಂದ ಕೂಡಲೆ ಒಂದು ಸಾರಿ, 10.30ರಿಂದ 11ರ ವೇಳೆಗೆ ಮತ್ತೊಂದು ಸಾರಿ, ಹಾಗು ಹೋಗುವ ಮುನ್ನ ಇನ್ನೂ ಒಂದು ಸಾರಿ ಹೀಗೆ ದಿನಕ್ಕೆ ಮೂರುಬಾರಿ ಹಾಜರಾತಿ ಹಾಕಲಾಗುತ್ತದೆ. ಹೊಸ ಟೆಂಡರ್ ನಿಯಮಗಳು ಜಾರಿಯಾಗುವ ಮೊದಲು ಗುತ್ತಿಗೆ ಪೌರಕಾರ್ಮಿಕರು ಬೆಳಗ್ಗೆ 7 ರಿಂದ 12.30 ರವರೆಗೂ ಕೆಲಸ ಮಾಡುತ್ತಿದ್ದರು, ಭಾನುವಾರ, ಬುಧುವಾರದಂದು ಬೆಳಗ್ಗೆ 10.30ವರೆಗೂ ಕೆಲಸ ಮಾಡುತ್ತಿದ್ದರು. ಹೊಸ ಟೆಂಡರ್ ನಿಯಮಗಳು ಬಂದ ಮೇಲೆ ಕೆಲಸದ ಅವಧಿ ಹೆಚ್ಚಾಗಿದೆ. ಹೆಚ್ಚು ಕಡಿಮೆ ವಿರಾಮದ ವೇಳೆ ಹೊರತು ಪಡಿಸಿ ಹಿಂದೆ ಸುಮಾರು 33 ಗಂಟೆಗಳಷ್ಟು ಕೆಲಸ ಮಾಡುತ್ತಿದ್ದರು. ಈಗ 11 ಗಂಟೆಗಳಷ್ಟು ಕೆಲಸದ ಅವಧಿ ಹೆಚ್ಚಾಗಿದೆ.

ಕೆಲಸದ ಅವಧಿಯ ಜೊತೆಗೆ ಹೆಚ್ಚಿದ ಕೆಲಸದ ಹೊರೆ

ಮೊದಲು ಪ್ರತಿ ವಾರ್ಡಿಗೆ ಸರಾಸರಿ 40 ಗುತ್ತಿಗೆ ಪೌರಕಾರ್ಮಿಕರು ಕೆಲಸ ಮಾಡುತ್ತಿದ್ದರು. ಹೊಸ ಟೆಂಡರ್ ನಿಯಮಗಳು ಬಂದ ಮೇಲೆ ಪ್ರತಿವಾರ್ಡಿಗೆ 22-23 ಕಾರ್ಮಿಕರಿದ್ದಾರೆ. ಮತ್ತಿಕೆರೆಯ 4ಇ ವಾರ್ಡಿನಲ್ಲಿ ಕಾರ್ಮಿಕರ ಸಂಖ್ಯೆ 40 ರಿಂದ 22 ಕ್ಕೆ ಇಳಿದರೆ, ಶಿವನ ಹಳ್ಳಿಯಲ್ಲಿ 38 ರಿಂದ 23 ಕ್ಕೆ ಇಳಿದಿದೆ. ನಂದಿನಿ ಲೇಔಟ್‌ನಲ್ಲಿ 40 ರಿಂದ 22 ಕ್ಕೆ ಇಳಿದಿದೆ. ಹಾಗಾಗಿ ಕೆಲಸದ ವಿಸ್ತೀರ್ಣ ಹೆಚ್ಚಿದೆ. ಮೊದಲು 1 ಮುಖ್ಯರಸ್ತೆ 1 ಅಥವಾ 2 ಅಡ್ಡರಸ್ತೆ ಗುಡಿಸಿದರೆ ಈಗ 1 ಮುಖ್ಯರಸ್ತೆ 3 ರಿಂದ 4 ಅಡ್ಡರಸ್ತೆ ಗುಡಿಸುತ್ತಾರೆ. ಹೆಚ್ಚು ಕಡಿಮೆ ಶೇ 50 ರಷ್ಟು ಕೆಲಸದ ವಿಸ್ತೀರ್ಣ ಹೆಚ್ಚಿದೆ.

ಕೆಲಸಗಾರರನ್ನು ಕಡಿಮೆ ಮಾಡಿರುವುದಕ್ಕೆ ನೀಡುವ ಕಾರಣವೆಂದರೆ ಟಿಪ್ಪರ್‌ಗಳು. ಹೊಸ ಟೆಂಡರ್ ನಿಯಮಗಳಲ್ಲಿ ಟಿಪ್ಪರ್‌ಗಳನ್ನು (ಸಣ್ಣಲಾರಿಗಳು) ಕಸ ಸಂಗ್ರಹಿಸಲು ಪರಿಚಯಿಸಲಾಗಿದೆ. ಒಂದು ಟಿಪ್ಪರ್‌ಗೆ 6 ಜನ ಕೆಲಸಗಾರರನ್ನು ಒಂದು ವಾರ್ಡಿನಿಂದ ತೆಗೆಯ ಬಹುದೆಂಬ ನಿಯಮವಿದೆ. ಆದರೆ ನಾವು ಭೇಟಿ ನೀಡಿದ ವಾರ್ಡುಗಳಲ್ಲಿ ಪ್ರತಿ ಟಿಪ್ಪರಿಗೆ 7-8 ಜನ ಕೆಲಸಗಾರರನ್ನು ತೆಗೆಯಲಾಗಿದೆ. ಈ ಮೊದಲು ತಿಳಿಸಿರುವ ವಾರ್ಡುಗಳಲ್ಲಿ ಎರಡೆರೆಡು ಟಿಪ್ಪರ್‌ಗಳನ್ನು ಬಳಸಲಾಗುತ್ತಿದೆ. ಪರಿಚಯಿಸಿದ ಮೊದಲೆರೆಡು ವಾರ ಟಿಪ್ಪರ್‌ಗಳು ಬರುತ್ತಿದ್ದುದು 2-3 ಬಾರಿಯಾದರೆ ಈಗ ಒಂದೇ ಬಾರಿ. ಟಿಪ್ಪರ್‌ಗಳು ಮನೆಮನೆಗೂ ಬಂದು ಕಸ ಸಂಗ್ರಹಿಸಬೇಕು. ಎಷ್ಟೊ ಮನೆಗಳವರು ಟಿಪ್ಪರ್ ಬರುವ ಸಮಯಕ್ಕೆ ಕಸ ಹಾಕಲಾಗದೆ ಮನೆಯ ಮುಂದೆಯೇ ಹಾಕುತ್ತಾರೆ. ಆ ಕಸವನ್ನು ಕಾರ್ಮಿಕರು ತೆಗೆಯುತ್ತಾರೆ. ಅಲ್ಲದೆ ಟಿಪ್ಪರ್‌ಗಳು ಮೇನ್ ರೋಡುಗಳಲ್ಲಿ ಮಾತ್ರ ಬರುತ್ತವೆ. ಗಲ್ಲಿಯಂತಹ ರಸ್ತೆಗಳಿಗೆ, ದಿಣ್ಣೆಯಂತಹ ರಸ್ತೆಗಳಿಗೆ ಟಿಪ್ಪರ್‌ಗಳು ಬರುವುದಿಲ್ಲ ವೆಂದು ಕಾರ್ಮಿಕರು ಹೇಳಿದರು. ಲಾರಿ ಕೆಲಸ ಮಾಡುವವರು ಮೊದಲು ಐದು ಜನರಿದ್ದರು ಈಗ ಅವರ ಸಂಖ್ಯೆ 3 ಕ್ಕೆ ಇಳಿದಿದೆ.

ಕೆಲಸದ ಹೊರೆ ಹೆಚ್ಚಾಗಲು ಇತರೆ ಕಾರಣಗಳೂ ಇವೆ. ಮೊದಲು ಪ್ರತಿ ರಸ್ತೆಯಲ್ಲೂ ಕಸದತೊಟ್ಟಿಗಳಿದ್ದವು. ಕಾರ್ಮಿಕರು ಕಸ ಸಂಗ್ರಹಿಸಿ ತೊಟ್ಟಿಗೆ ಸುರಿಯುತ್ತಿದ್ದರು. ಲಾರಿಗಳು ತೊಟ್ಟಿಯ ಬಳಿಯಿಂದ ಕಸ ತುಂಬಿಕೊಂಡು ಸಾಗಿಸುತ್ತಿದ್ದವು ಈಗ ತೊಟ್ಟಿಗಳನ್ನು ತೆಗೆಯಲಾಗಿವೆ. ತಳ್ಳುವ ಗಂಟೆಗಾಡಿಗಳಲ್ಲಿ ಕಸ ಸಂಗ್ರಹಿಸಿಕೊಂಡು ಲಾರಿ ನಿಂತಿರುವಲ್ಲಿಗೆ ಹೋಗಿ ಕಸ ಹಾಕಬೇಕು. ಪ್ರತಿ ಗಂಟೆಗಾಡಿಯಲ್ಲೂ 4 ಪ್ಲಾಸ್ಟಿಕ್ ಡ್ರಮ್‌ಗಳಿರುತ್ತವೆ. ಕೆಲವೊಮ್ಮೆ ಲಾರಿತಪ್ಪಿದರೆ ದೂರದಲ್ಲಿ ಕೆಲವು ನಿರ್ದಿಷ್ಟ ಸ್ಥಳಗಳಲ್ಲಿ ಈಗಲೂ ಇರುವ ಕಲ್ಲಿನ ತೊಟ್ಟಿಗೆ ತೆಗೆದುಕೊಂಡು ಹೋಗಿ ಕಸವನ್ನು ಸುರಿದು ಬರಬೇಕು. ಭಾರದ ಡ್ರಮ್ಮುಗಳನ್ನೂ ಎತ್ತಿ ಸುರಿಯಬೇಕು. ದಿಣ್ಣೆ ಯಂತಹ ರಸ್ತೆಗಳಲ್ಲಿ ಬ್ರೇಕಿಲ್ಲದ ತುಂಬಿದ ಗಂಟೆಗಾಡಿಗಳನ್ನು ತಳ್ಳಿಕೊಂಡು ಹೋಗಲು ಸಾಹಸ ಮಾಡಬೇಕು. ಪ್ರತಿ ಕಾರ್ಮಿಕರು ಸರಾಸರಿ 2-3 ಗಾಡಿ ಕಸವನ್ನು ಸಂಗ್ರಹಿಸಿಕೊಂಡು ಹೋಗಿ ಸುರಿಯುತ್ತಾರೆ.

ಗಂಟೆಗಾಡಿ ತಳ್ಳುವುದರಿಂದ ಭುಜ, ಎದೆ, ಬೆನ್ನು ನೋಯುವುದೆಂದು ಕಾರ್ಮಿಕರು ಹೇಳಿದರು. ಮುಟ್ಟಿನ ಸಮಯದಲ್ಲಿ ಹೊಟ್ಟೆ ನೋವು ಹೆಚ್ಚಾಗುತ್ತದೆ ಎಂದು ಮಹಿಳಾ ಕಾರ್ಮಿಕರು ಹೇಳಿದರು.

ಹೊಸ ಟೆಂಡರ್ ನಿಯಮಗಳು ಬಂದ ಮೇಲೆ ಕೆಲವು ಮುಖ್ಯರಸ್ತೆಗಳಲ್ಲಿ ರಾತ್ರಿ ಹೊತ್ತಿನಲ್ಲೂ ಕೆಲಸ ಮಾಡಿಸಲಾಗುತ್ತಿದೆ. ರಾತ್ರಿ ಪಾಳಿಯಲ್ಲಿ ಗಂಡಸರಷ್ಟೇ ಕೆಲಸ ಮಾಡುವುದು. ಸಂಜೆ 6.30 ರಿಂದ 12.30 ರವರೆಗೂ ಕೆಲಸ ಮಾಡುತ್ತಾರೆ. ಮನೆ ತಲುಪಿ ಊಟ ಮಾಡುವ ವೇಳೆಗೆ 1 ಅಥವಾ 1.30 ಟೆಂಡರ್ ನಿಯಮದ ಭಾಗ 4 ರಲ್ಲಿ 2ನೇ ಪಾಳಿಯ ಕೆಲಸದ ಅವಧಿ ರಾತ್ರಿ 7 ರಿಂದ 11.30 ರವರೆಗೆಂದು ಸ್ಪಷ್ಟ ಪಡಿಸಲಾಗಿದೆ. ಅಂದರೆ ಈಗ 2ನೇ ಪಾಳಿಯ ಕೆಲಸದ ಅವಧಿ 1/3 ದಷ್ಟು ಹೆಚ್ಚಾಗಿದೆ. ರಾಜಾಜಿನಗರದಲ್ಲಿ ರಾತ್ರಿ ಪಾಳಿಯಲ್ಲಿ ಕೆಲಸ ಮಾಡುವ ಕಾರ್ಮಿಕರನ್ನು ಮಾತಾಡಿಸಲಾಯಿತು. ಹೊಸದಾಗಿ ಕೆಲಸಕ್ಕೆ ಸೇರಿದ್ದೇವೆ, ಇನ್ನೂ ಒಂದು ತಿಂಗಳ ಸಂಬಳವನ್ನು ತೆಗೆದುಕೊಂಡಿಲ್ಲ ಎಂದು ಹೇಳಿದರು. ಮೂರು ವಾರಗಳಿಂದ ಅವರು ಕೆಲಸ ಮಾಡುತ್ತಿದ್ದಾರೆ. ರಾತ್ರಿ ಪಾಳಿಯೆಂದು ಹೆಚ್ಚಿನ ಸಂಬಳವಾಗಲಿ, ಊಟಕ್ಕೆಂದು ಹಣವನ್ನಾಗಲಿ ಕೊಡುವುದಿಲ್ಲ, ಸಂಬಳ 1300/- ಕೊಡುವುದಾಗಿ ಹೇಳಿದ್ದಾರೆ ಎಂದು ಹೇಳಿದರು. ರಾತ್ರಿ ವೇಳೆ ಟ್ರಾಫಿಕ್ ಪೋಲಿಸರು ಇರುವುದಿಲ್ಲ, ಗಾಡಿಗಳು ಎರ್ರಾ ಬಿರ್ರಿ ಓಡಾಡುತ್ತಿರುತ್ತವೆ. ರಸ್ತೆ ಮಧ್ಯದಲ್ಲಿ ಕಸ ಗುಡಿಸುವುದು ಅಪಾಯಕಾರಿ. ನಮ್ಮ ಗಾಡಿ ಅಡ್ಡವಾದರೆ ಚಾಲಕರು ಬಾಯಿಗೆ ಬಂದಂತೆ ಬೈಯುತ್ತಾರೆ. ರಾತ್ರಿ ತುಂಬಾ ಚಳಿಯಿರುತ್ತದೆ ಕೆಂಪು ಪಟ್ಟಿಯ ಅರ್ಧ ತೋಳಿನ ಕೋಟು ಬಿಟ್ಟರೆ ಬೇರೇನೂ ಕೊಡುವುದಿಲ್ಲ. ಹೋಟೆಲ್ಲುಗಳ ಮುಂದೆ ವಾಹನಗಳನ್ನು ನಿಲ್ಲಿಸುವ ಜಾಗವನ್ನು ಗುಡಿಸಬೇಕಾದರೆ ಜನರು ಹೋಟೆಲಿನಿಂದ ಹೊರ ಬಂದು ಗಾಡಿಗಳನ್ನು ತೆಗೆಯುವವರೆಗೂ ಕಾದು ಗುಡಿಸಬೇಕು.

ಒಟ್ಟಾರೆ ಹೊಸ ಟೆಂಡರ್ ನಿಯಮಗಳು ಜಾರಿಗೆ ಬಂದ ಮೇಲೆ ಕೆಲಸದ ಅವಧಿ, ಕೆಲಸದ ಹೊರೆ ಹೆಚ್ಚಾಗಿದೆ. ಇಬ್ಬರು ಮಾಡುವ ಕೆಲಸವನ್ನು ಒಬ್ಬರು ಮಾಡ ಬೇಕಾಗಿದೆ. ಮೊದಲು 12.30 ರವರೆಗೆ ಕೆಲಸ ಮಾಡಿದ ಮೇಲೆ ಮನೆಗೆಲಸವೊ ಇತರೆ ಕೆಲಸವೊ ಮಾಡಿ ಹೆಚ್ಚಿನ ಸಂಪಾದನೆ ಮಾಡಿಕೊಳ್ಳುತ್ತಿದ್ದರು. ಈಗ ಕೆಲಸ ಮುಗಿಸಿ ಮನೆ ತಲುಪುವುದೆ ಮಧ್ಯಾಹ್ನ 3 ಗಂಟೆಯಾಗುತ್ತದೆ. ಸುಸ್ತಾಗುವುದರಿಂದ ಯಾವ ಕೆಲಸವನ್ನು ಮಾಡಲಾಗುವುದಿಲ್ಲ, ಹಾಗಾಗಿ ಹೆಚ್ಚಿನ ಸಂಪಾದನೆಗೆ ಖೋತಾ ಬಿದ್ದಿದೆ.

ಕೆಲಸದಿಂದ ವಜಾ ಮಾಡುವುದು, ಕಿರುಕುಳ ಹೆಚ್ಚಿಸಿರುವುದು ಪಾಲಿಕೆಯು ನೀಡಿರುವ ಬೋನಸ್ !

ಹೊಸ ಟೆಂಡರ್ ನಿಯಮಗಳು ಜಾರಿಗೆ ಬಂದ ಮೇಲೆ ಸುಮಾರು 1000 ಗುತ್ತಿಗೆ ಪೌರ ಕಾರ್ಮಿಕರನ್ನು ತೆಗೆಯಲಾಗಿದೆ. ಹಲವರನ್ನು ಬಲವಂತವಾಗಿ ದೂರದ ವಾರ್ಡಿನಲ್ಲಿ ಕೆಲಸಕ್ಕೆ ಹಾಕಲಾಗಿದೆ. ಅದೇ ವಾರ್ಡಿನಲ್ಲಿ ವಾಸ ಮಾಡುವ ಕೆಲಸಗಾರರನ್ನು ಉಳಿಸಿಕೊಂಡು ಬೇರೆ ಕಡೆಯಿಂದ ಬರುವ ಕಾರ್ಮಿಕರನ್ನು ದೂರದ ವಾರ್ಡುಗಳಿಗೆ ಕಳಿಸುವ ಯೋಜನೆಯನ್ನು ರೂಪಿಸಿ, ಜಾರಿಗೊಳಿಸುತ್ತಿರುವವರು ಸ್ಥಳೀಯ ಕಾರ್ಪೊರೇಟರುಗಳು, ''ಗಿಡಗೆಂಟೆ ಕಡ್ದು, ಕಲ್ಲು ಮಣ್ಣಿನ ರಸ್ತೆಗಳನ್ನು ಟಾರ್ ರಸ್ತೆ ಮಾಡಿ, ಲೇಔಟ್ ಮಾಡೋವಾಗ ನಾವು ಯಾವ ಏರಿಯಾದಿಂದ ಬರ್‍ತೀವಿ ಅನ್ನೋದು ಬೇಕಾಗಿರ್‍ಲಿಲ್ಲ, ಈಗ ಓಟ್ ಸಿಗುತ್ತೆ ಅಂತ ಇಲ್ಲಿ ವಾಸ ಮಾಡೋರ್ ಮಾತ್ರ ಇರಿ, ಬೇರೆಕಡೆಯಿಂದ ಬರೋರು ಹೋಗಿ ಅನ್ನೋದು ಯಾವ ನ್ಯಾಯ?'' ಎಂದು ಕೇಳಿದರು ಬಸವೇಶ್ವರ ನಗರದ ಕಾರ್ಮಿಕರು. ಪ್ರತಿ ವಾರ್ಡಿನಲ್ಲೂ ಸರಾಸರಿ 15-18 ಕಾರ್ಮಿಕರನ್ನು (ಶೇ.40 ರಷ್ಟು) ವಜಾ ಮಾಡಲಾಗಿದೆ ಅಥವಾ ಬೇರೆ ವಾರ್ಡುಗಳಿಗೆ ವರ್ಗಾಯಿಸಲಾಗಿದೆ. ನಂದಿನಿ ಲೇಔಟ್‌ನಲ್ಲಿ ಕೆಲಸ ಮಾಡುತ್ತಿದ್ದ 40 ಜನ ಕಾರ್ಮಿಕರಲ್ಲಿ 3 ಜನರನ್ನು ವಜಾ ಮಾಡಲಾಗಿದ್ದು, 15 ಜನರನ್ನು ಬೇರೆ ವಾರ್ಡುಗಳಿಗೆ ಕಳಿಸಲಾಗಿದೆ. ಶಿವನ ಹಳ್ಳಿಯಲ್ಲಿ ಕೆಲಸ ಮಾಡುತ್ತಿದ್ದ 38 ಜನರಲ್ಲಿ 15 ಜನರನ್ನು ಬಲವಂತವಾಗಿ ಬೇರೆ ವಾರ್ಡುಗಳಿಗೆ ಕಳಿಸಲಾಗಿದೆ. ಅವರೆಲ್ಲ ಈಗ ಪ್ರಕಾಶನಗರ ಅಥವಾ ಮಲ್ಲೇಶ್ವರಕ್ಕೆ ನಡೆದು ಹೋಗಬೇಕು. ಬಸ್ ಚಾರ್ಜ್‌ಕೊಟ್ಟು ಓಡಾಡಲು ಅವರಿಗೆ ಸಾಧ್ಯವಾಗುವುದಿಲ್ಲ. ಮತ್ತಿಕೆರೆಯ 4ಇ ವಾರ್ಡಿನದೂ ಅದೇ ಕತೆ.3 ಜನರನ್ನು ವಜಾ ಮಾಡಲಾಗಿದೆ 15 ಜನರನ್ನು ಬೇರೆ ಬೇರೆ ವಾರ್ಡುಗಳಿಗೆ ವರ್ಗಾಯಿಸಲಾಗಿದೆ. ಹಲವಾರು ಕಾರ್ಮಿಕರು ಕಳೆದ 10 ವರ್ಷಗಳಿಂದ ಒಂದೇ ವಾರ್ಡಿನಲ್ಲಿ ಕೆಲಸ ಮಾಡಿಕೊಂಡು ಬಂದಿದ್ದರು. ಒಂದೆ ಕಡೆ ಕೆಲಸ ಮಾಡುತ್ತಿದ್ದರಿಂದ ಆ ಬಡಾವಣೆಯ ನಿವಾಸಿಗಳಿಗೆ ಮತ್ತು ಅವರದೇ ಒಂದು ಕೆಲಸ ಮಾಡುವ ರೀತಿಗೆ ಒಗ್ಗಿ ಹೋಗಿದ್ದ ಕಾರ್ಮಿಕರಿಗೆ ಬೇರೆ ಸ್ಥಳಗಳಿಗೆ ಹೊಂದಿ ಕೊಳ್ಳುವುದು ಕಷ್ಟವಾಗುತ್ತಿದೆ.

ನಿತ್ಯದ ಕಿರುಕುಳವಂತೂ ಮುಂದುವರಿದೇ ಇದೆ. ಶೌಚಾಲಯವಿಲ್ಲ, ಕೂತು ಸುಧಾರಿಸಿಕೊಳ್ಳಲು ಜಾಗವಿಲ್ಲ, ಕುಡಿಯುವ ನೀರಿಲ್ಲ. ಒಂದು ಗಳಿಗೆ ಕೂತರು ಮೇಸ್ತ್ರಿಯಿಂದ ಬೈಸಿಕೊಳ್ಳಬೇಕು. ಕಾನೂನು ಬದ್ಧವಾಗಿ ಬರಬೇಕಾಗಿದ್ದನ್ನು ಕೇಳಿದರೆ ಕೆಲಸದಿಂದ ವಜಾ ಮಾಡುವುದಾಗಿ ಬೆದರಿಸುತ್ತಾರೆ. ಗುತ್ತಿಗೆದಾರರಂತೂ 'ಯಾವ ಕೋರ್ಟ್ ಆಜ್ಞೆಯೂ ನಮಗೇನೂ ಮಾಡಲು ಸಾಧ್ಯವಿಲ್ಲ, ಈಗ ಕೊಡುತ್ತಿರುವ ಸಂಬಳಕ್ಕಿಂತ ಹೆಚ್ಚಿನ ಸಂಬಳ ಕೊಡಲು ಸಾಧ್ಯವೇ ಇಲ್ಲ' ಎಂದು ಸಾರ್ವಜನಿಕವಾಗಿಯೇ ಹೇಳಿದ್ದಾರೆ.

ಟೆಂಡರ್ ನಿಯಮಗಳು ಜಾರಿಗೆ ಬಂದಿಲ್ಲ, ಕಾನೂನು ಬದ್ಧವಾಗಿ

ಕಾರ್ಮಿಕರಿಗೆ ಸಲ್ಲ ಬೇಕಾದುದನ್ನು ಕೊಡಿಸಲು ಪಾಲಿಕೆಯ ಅಧಿಕಾರಿಗಳಾಗಲಿ, ಕಾರ್ಮಿಕ ಇಲಾಖೆಯ ಅಧಿಕಾರಿಗಳಾಗಲಿ ಪ್ರಯತ್ನ ಪಡಲಿಲ್ಲ. ಟೆಂಡರ್ ನಿಯಮಗಳ ಕರಡಿನಲ್ಲಿ ಪ್ರತಿವಾರ್ಡಿಗೆ 40 ಜನ ಕಾರ್ಮಿಕರಿರಬೇಕೆಂದು ಸ್ಪಷ್ಟವಾಗಿ ತಿಳಿಸಲಾಗಿದೆ. ಕರಡನ್ನು ಅಂತಿಮವಾಗಿ ಜಾರಿಗೊಳಿಸುವ ಸಮಯದಲ್ಲಿ ಇಂತಿಷ್ಟೇ ಕಾರ್ಮಿಕರಿರಬೇಕೆಂಬುದನ್ನು ಬದಲಾಯಿಸಿದ್ದು, ಆ ಬಗ್ಗೆ ಸಂಘಕ್ಕಾಗಲಿ, ಕಾರ್ಮಿಕರಿಗಾಗಲಿ ಯಾವುದೇ ಮಾಹಿತಿಯನ್ನು ನೀಡಲಿಲ್ಲ. ಹಾಗಾಗಿ ಗುತ್ತಿಗೆದಾರರು ಕಾರ್ಮಿಕರನ್ನು ಯದ್ವಾತದ್ವ ಕೆಲಸದಿಂದ ವಜಾ ಮಾಡಿದ್ದರು. ನ್ಯಾಯ ಬದ್ಧ ಕನಿಷ್ಠ ವೇತನವನ್ನು ಕೋರಿ ಕಾರ್ಮಿಕರು ಪ್ರತಿಭಟಿಸಿದಾಗ, ಗುತ್ತಿಗೆದಾರರು ವಜಾ ಮಾಡುವುದನ್ನೆ ಅಸ್ತ್ರವಾಗಿ ಬಳಸಿಕೊಂಡು ಪ್ರತಿಭಟನೆಯನ್ನು ಹತ್ತಿಕ್ಕಿದರು. ಅಂತಿಮವಾಗಿ ಕಾರ್ಮಿಕರ ಸಂಖ್ಯೆಯಲ್ಲಿ ಆದ ಬದಲಾವಣೆ ಕುರಿತ ಮಾಹಿತಿಯನ್ನು ಪಡೆಯಲು ಸಂಘದವರು ತಿಂಗಳಾನುಗಟ್ಟಲೆ ಪ್ರಯತ್ನಿಸಿದರು. ಆಯುಕ್ತರು ಹೇಳಿದರೂ ಪಾಲಿಕೆಯ ಅಧಿಕಾರಿಗಳು ಮಾಹಿತಿ ಕೊಡದೆ ಸತಾಯಿಸಿದರು. ಸಂಘದ ಪದಾಧಿಕಾರಿಗಳ ಬಗ್ಗೆ ಪಾಲಿಕೆಯ ಅಧಿಕಾರಿಗಳಿಗಿರುವುದು ಕೇವಲ ಮತ್ಸರವೆಂಬುದು ಸ್ಪಷ್ಟವಾಯಿತು.

ಟೆಂಡರ್ ನಿಯಮಗಳ ನಮೂದಿಸಿರುವ ವೈದ್ಯಕೀಯ ಸೌಲಭ್ಯ, ಶೌಚಾಲಯ, ವಿಶ್ರಮಿಸುವ ಸ್ಥಳ, ಪ್ರಥಮ ಚಿಕಿತ್ಸೆಯ ವ್ಯವಸ್ಥೆ ಯಾವುದೊ ಕಾರ್ಮಿಕರಿಗೆ ಲಭ್ಯವಾಗಿಲ್ಲ. ಪಾಲಿಕೆಯ ಆಯುಕ್ತರನ್ನು ಮಾತನಾಡಿಸಿ-ದಾಗ ಅವರು ಬದಲಾವಣೆಯನ್ನು ಸಂಪೂರ್ಣವಾಗಿ ತರುವುದು ಕಷ್ಟವೆಂದು ತಮ್ಮ ಅಸಹಾಯಕತೆ ತೋಡಿಕೊಂಡರು. ಹಿಂದಿಗಿಂತ ಈಗ ಸಂಬಳ ಹೆಚ್ಚಾಗಿಲ್ಲವೆ. ಹಸಿರುಕೋಟು ನೀಡಿಲ್ಲವೆ? ಸ್ವಚ್ಛ ಬೆಂಗಳೂರು ಕಾರ್ಯಕ್ರಮದಲ್ಲಿ ಕಾರ್ಮಿಕರೆಲ್ಲರೂ ಸಮವಸ್ತ್ರ ತೊಟ್ಟು ಸಂತೋಷದಿಂದ ಪರೇಡ್ ಮಾಡಿದರು. ಬದಲಾವಣೆ ನಿಧಾನವಾಗಿ ಬರುತ್ತದೆ ಎಂದು ಹೇಳಿದರು. ಕಾನೂನನ್ನು ಎತ್ತಿ ಹಿಡಿಯಬೇಕಾದ ಹಿರಿಯ ಅಧಿಕಾರಿಗಳಿಂದ ಬಂದ ಮಾತಿವು.

ಸಂಘವು ಹಲವಾರು ಬಾರಿ ಮುಖ್ಯಮಂತ್ರಿಗಳ ಮುಂದೆ, ಶಾಸಕಾಂಗದ ಮುಂದೆ ಗುತ್ತಿಗೆ ಪೌರಕಾರ್ಮಿಕರ ಮೇಲಾಗುತ್ತಿರುವ ಅನ್ಯಾಯದ ಕುರಿತು ಮನವಿ ಸಲ್ಲಿಸಿತು. ಪತ್ರಿಕೆಗಳ ಮೂಲಕ ಪ್ರಚಾರ ಮಾಡಿತು. ಆದರೂ ಯಾವ ಕ್ರಮವೂ ಜರುಗಲಿಲ್ಲ. ಕನಿಷ್ಠ ವೇತನ ಗೆಜೆಟ್‌ನಲ್ಲಿ ನೋಟಿಫೈ ಆಗಿ 16 ತಿಂಗಳು ಕಳೆದರೂ ಕಾರ್ಮಿಕರ ಕೈಗೆ ಕನಿಷ್ಟವೇತನ ಸಿಗಲಿಲ್ಲ. ಹೊಸ ಟೆಂಡರ್ ನಿಯಮಗಳ ಕಡತಕ್ಕೆ ಮುಖ್ಯಮಂತ್ರಿಗಳ ಸಹಿ ಬೀಳಲು ತಿಂಗಳುಗಳೇ ಹಿಡಿದವು. ಆನಂತರವೂ ಏನೂ ಆಗಲಿಲ್ಲ. ಆ ಬಗ್ಗೆ ಮಾತನಾಡಲು ಮುಖ್ಯಮಂತ್ರಿಗಳ ಸಂದರ್ಶನ ಕೋರಿ ಕಳುಹಿಸಿದ ಪತ್ರಕ್ಕೂ ಉತ್ತರ ದೊರೆತದ್ದು ಕೆಲವು ತಿಂಗಳುಗಳ ಬಳಿಕ ಅದೂ ಸಹ 'ಸಂಬಂಧಪಟ್ಟವರಿಂದ ವಿವರಣೆ ಕೇಳಲಾಗಿದೆ' ಎಂದು. ಗುತ್ತಿಗೆದಾರರು ಮಾತ್ರ ಆರಾಮವಾಗಿ ಕಾನೂನನ್ನು ಉಲ್ಲಂಘಿಸಿದ್ದಲ್ಲದೆ ಪಾಲಿಕೆಯಾಗಲಿ, ಕೋರ್ಟಿನ ಆಜ್ಞೆಯಾಗಲಿ ಯಾವ ಅಧಿಕಾರವೇ ಆಗಲಿ ನಮ್ಮನ್ನು ತಡೆಯುವುದಿಲ್ಲ. ಸರ್ಕಾರವಾಗಲಿ, ಐ.ಎ.ಎಸ್ ಅಧಿಕಾರಿಗಳಾಗಲಿ ಬಂದು ಹೋಗುವವರು ನಾವು ಶಾಶ್ವತ ಎಂದು ಗುತ್ತಿಗೆದಾರರು ಬಹಿರಂಗವಾಗಿ ಹೇಳಿಕೊಂಡಿದ್ದು ಸರ್ಕಾರ ಮತ್ತದರ ಇಲಾಖೆಗೆ ಬಗ್ಗೆ ಇರವ ತಾತ್ಸರವನ್ನು ತೋರಿಸುತ್ತದೆ.

ಜನತಾ ನ್ಯಾಯಾಲಯದಲ್ಲಿ ಗುತ್ತಿಗೆ ಪೌರಕಾರ್ಮಿಕರು ಮಾತನಾಡಿದಾಗ.....

ನ್ಯಾಯಾಲಯದ ತೀರ್ಪಿಗೆ ಸರ್ಕಾರವೇ ಕಿವಿಗೊಡದಿದ್ದಾಗ, ಜನತೆಯೇ ನ್ಯಾಯ ಅನ್ಯಾಯವನ್ನು ಪರಿಶೀಲಿಸಲೆಂದು 10.4.2004 ರಂದು ವರದಾಚಾರ್ ಕಲಾ ಮಂದಿರ, ಶೇಷಾದ್ರಿಪುರಂ, ಬೆಂಗಳೂರು 20 ಇಲ್ಲಿ ಜನತಾ ನ್ಯಾಯಾಲಯದ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ವಿವಿಧ ಕ್ಷೇತ್ರಗಳಲ್ಲಿನ ಗಣ್ಯ ವ್ಯಕ್ತಿಗಳನ್ನೊಳ-ಗೊಂಡ ತೀರ್ಪುಗಾರರ ಮಂಡಳಿಯು ಕಾರ್ಮಿಕರ ಅಹವಾಲುಗಳನ್ನು ಕೇಳಿಸಿಕೊಂಡು ತಮ್ಮ ತೀರ್ಪು ನೀಡಿದರು. ಶ್ರೀ ಕೊ. ಚೆನ್ನ ಬಸಪ್ಪ ನಿವೃತ್ತ ನ್ಯಾಯಾಧೀಶರು, ಶ್ರೀ ಓ.ಶ್ರೀಧರನ್ ದಲಿತನಾಯಕರು, ಪ್ರೊ॥ ರವಿವರ್ಮಕುಮಾರ್, ಹಿಂದುಳಿದ ವರ್ಗಗಳ ಆಯೋಗದ ಮಾಜಿ ಅಧ್ಯಕ್ಷರು, ಶ್ರೀಮತಿ ಹೇಮಲತ ಮಹಿಷಿ ಮಹಿಳಾ ಆಯೋಗದ ಸದಸ್ಯರು, ಶ್ರೀಮತಿ ಶಕ್ಕುನ್ - ವಿಮೋಚನ, ಮಹಿಳಾ ಸಂಘಟನೆ, ಪ್ರೊ॥ಹಸನ್ ಮನ್ಸೂರ್ ಪಿ.ಯು.ಸಿ.ಎಲ್., ಶ್ರೀ ಗೋಡ್‌ಬೋಲೆ - ಕಾರ್ಮಿಕ ಚಳುವಳಿ ನಾಯಕರು, ಶ್ರೀಮತಿ ಕಾತ್ಯಾಯಿನಿ ಚಾಮರಾಜ್ - ಸಿವಿಕ್ ಸ್ವಯಂ ಸೇವಾ ಸಂಸ್ಥೆ ಇವರುಗಳು ತೀರ್ಪುಗಾರರ ಮಂಡಳಿಯಲ್ಲಿದ್ದರು.

ಶಾರದಮ್ಮ : ನಮ್ಮ ಕೆಲಸ ತುಂಬ ಕಷ್ಟದ್ದು. ಒಂದುವಾರ ಹತ್ತು ದಿವಸದಲ್ಲೆ ಪೊರಕೆ ತುಂಡಾಗುತ್ತೆ. ಹೊಸ ಪರ್ಕೆ ಕೇಳಿದ್ರೆ ಕೊಡಲ್ಲ. ಒಂದ್ ಸಾರಿ ಕೇಳಿದ್ದಕ್ಕೆ ಮೇಸ್ತ್ರಿ ನಿಂದ್ ಸೀರೆ ಬಿಚ್ಚಿ ಗುಡ್ಸು ಅಂದ. ನಾವೆ ದುಡ್ಡಾಕಿ ಪರ್ಕೆ ತಗೋತೀವಿ. ದೂಳ್ ಕಸ ಗುಡಸ್ಕೇ ಪರ್ಕೆನೆ ಸರಿ. ಗಂಟೆಗಾಡಿ ಕೊಟ್ಟಿದ್ದಾರೆ ಕಸ ತುಂಬ್ಕಂಡು ತಳ್ಳೊಕೆ. ಅಪ್ ಇದ್ರೆ ಕಷ್ಟ. ಬಸ್‌ಗಳ್ ಬಂದ್ರೆ ಬಲನೆಲ್ಲಾ ಬಿಟ್ಟು ಇಡ್ಕಬೇಕು. ಗಾಡಿಗೆ ಬ್ರೇಕಿಲ್ಲ, ಗಾಡಿಗೆ ಎಣ್ಣೆ ನಾವೆ ಹಾಕ್ಕೊಬೇಕು, ಕೆಟ್ರೆ ನಾವೆ ರಿಪೇರಿ ಮಾಡಿಸ್ಬೇಕು. ಹೊಸ ಟೆಂಡರ್ ಬಂದು ಎರಡಾಳ್ ಮಾಡೊ ಕೆಲ್ಸ ಒಬ್ರೆ ಮಾಡ್ತೀವಿ. ಬಗ್ಗಿ ಗುಡ್ಸೊದಿಕ್ಕೆ ಬೆನ್ನು ಕೈ ನೋವ್ ಬರುತ್ತೆ. ಗಂಟೆಗಾಡಿ ತಳ್ಳೊದು ಮುಟ್ಟಿನ ಟೈಮಲ್ಲಿ ಕಷ್ಟ ಹೊಟ್ಟೆ ನೋವ್

ಬರುತ್ತೆ. ನಾಷ್ಟಕ್ಕೆ ಟೈಮೇಯಿಲ್ಲ. ಮದ್ಯಾನ ಮನೆಗೆ ಬಂದು ಅಡ್ಗೆ ಮಾಡಿ ಉಣ್ಣೋದೇ ಸರ್ಯಾಗಿ ಮಾಡೋ ಊಟ. ಅಸ್ವಾಗುತ್ತೆ ಕಾಪಿ ಗೀಪಿ ಕುಡ್ಕೋತೀವಿ. ಒಂದ್ ಗಳ್ಗೆ ಕೂಂತ್ಕೊಳೋ ಅಂಗಿಲ್ಲ ರೇಗ್ತಾರೆ. ಕಸದೊಳಗೆ ಗಾಜು, ತಂತಿ, ಮಳೆಗಳು ಇರ್ತವೆ. ಕೈಗೆ ಚುಚ್ಕೊಂಡ್ ಗಾಯ ಆಗೋದು ಮಾಮೂಲಿ. ಕಕ್ಕಸ್ ಬಟ್ಟೆ, ಮುಟ್ಟಿನ ಬಟ್ಟೆನೆಲ್ಲಾ ಅಂಗಂಗೆ ಆಕ್ ಬಿಟ್ಟಿರ್ತಾರೆ. ಒಂದ್ ಮೇನ್‌ರೋಡು ಎರ್ಡುಮೂರು ಸಣ್‌ರೋಡ್ ಗುಡಿಸ್ಬೇಕು. ಲಾರಿ ತಪ್ಪಿದ್ರೆ ಮನೆಯೋರು ಕಸನಾ ಮೋರಿಗಾಗ್ತಾರೆ, ಅದ್ನ ಎತ್‌ಬೇಕು. ಕಸ ಆಕೋ ಲಾರಿ ಸಿಗ್ದೆ ಓದ್ರೆ ದೂರದ ಕಲ್ ತೊಟ್ಟಿಗೋಗಿ ಡ್ರಮ್ಮೆತ್ತಿ ಸುರಿಬೇಕು, ಒಂದೊಂದಿನ ಎರ್ಡ್ ಮೂರ್ ಸರ್ತಿ ಓಡಾಡಬೇಕು. ನಾಯಿ, ಬೆಕ್ಕು ಸತ್ರೆ ಎತ್‌ಬೇಕು. ಮೋರಿಲಿ ಬಿದ್ದಿರೋ ಕಸ ಎತ್‌ಬೇಕು. ಮಳೆ ಬಂದರೆ ಕಸ ನೀರು ಸೇರ್ಕಂಡು ಕೊಚ್ಚೆ ಆಗುತ್ತೆ. ಗುಡ್ಸಕೆ ಎತ್ತಕ್ಕೆ ಕಷ್ಟ. ಬರಿಕೈಲೆ ಎಲ್ಲಾ ಮಾಡ್ಬೇಕು. ಗಾಡಿ ನಿಲ್ಸಕ್ಕೆ ಜಾಗ ಇಲ್ಲ. ಕೇಳ್ಕೊಂಡು ಯಾರಾದ್ರು ಮನೆ ಹತ್ರ ನಿಲ್ಲಿಸ್ತೀವಿ. ಒಂದ್ಸಲ ನನ್‌ಗಾಡಿ ಅವ್ರು ಇಟ್ ಬಿಟ್ಟದ್ರು, ಐದ್‌ಸಾವ್ರ ಕಟ್ಟು ಅಂದಿದ್ರು. ಪರ್ಕೆ ಮಂಕ್ರಿ ಇಡೋಕು ಜಾಗ ಇಲ್ಲ ನಾವೇ ಕೇಳ್ಕಂಡು ಯಾರ್ದಾದ್ರು ಮನೇಲಿ ಇಡ್ತೀವಿ. ಇಲ್ಲಾಂದ್ರೆ ನಾವೇ ಮನೆಗಂಟ ತಗಂಡ್ ಬಂದು ತಗೊಂಡೋಗಬೇಕು. ಗುಡ್ಸಿಗುಡ್ಸಿ ಮೊಣಕ್ಕೆ ಬುಜಸ್ಯಾನೆ ನೋವ್ ಬರುತ್ತೆ. ಧೂಳ್ ಕುಡ್ದು ಕೆಮ್ ಬರುತ್ತೆ. ಲೇಟಾದ್ರೆ ಆಬ್‌ಸೆಂಟಾಗ್ತಾರೆ.

ಜಯಮ್ಮ : ಗುಡ್ಸೊ ಜನ್ದಲ್ಲಿ ಒಲ್‌ಮಾದಿಗ್ರೆ ಜಾಸ್ತಿ. ಬೇರೆಯೋರು ಸ್ವಲ್ಪ ಜನ ಇದಾರೆ. ನಮ್ ಕೆಲ್ಸಕ್ಕೆ ಗೌರವ ಇಲ್ಲ. ನಿಮ್ ವಲ್ಸ್ ಎಲ್ಲಾ ಕ್ಲೀನ್ ಮಾಡ್ತೀವಿ. ನೀವು ನಮ್ಮನ್ನೇ ಕೀಳಾಗಿ ನೋಡ್ತೀರಿ. ''ನಾವ್ ಗುಡ್ಸೋದ್ ಬಿಟ್ರೆ ಏನ್ ಆಗ್‌ಬೋದು ಲೆಕ್ಕ ಆಕೋಳಿ. ನಿವಮ್ ಆರೋಗ್ಯ ಚೆನ್ನಾಗಿರೋದು ನಮ್ಮಿಂದಾನೆ ತಾನೆ ? ನವಮ್ ಆರೋಗ್ಯ ಚೆನ್ನಾಗಿರೋದು ಬೇಡ್ವಾ ?'' ನಾವು ಬಿಸ್ಲು ಮಳೆ ಅನ್ದೇ ದುಡಿತೀವಿ, ಸರ್ಯಾದ್ ಸಂಬ್ಳ ಬೇಡ್ವ, ನಮ್ ಮಕ್ಳು ಚೆನ್ನಾಗಿರೋದ್ ಬೇಡ್ವಾ ? ಕಷ್ಟ ಪಟ್ಟು ನಿಮ್ ರೋಡ್ ಕ್ಲೀನ್ ಮಾಡ್ತೀವಿ ನಾವ್ ಬಾಯಾರಿ ನೀರ್ ಕೇಳಿದ್ರೆ ಕಕ್ಕಸ್ ಚೊಂಬಲ್ಲಿ ಕೊಡ್ತಾರೆ. ಅದ್ಕೆ ನಾನು ಕೇಳೋಕೆ ಓಗಲ್ಲ. ಒಂದ್ ಸರ್ತಿ ಒಬ್ರು ಮನೇರು ನೀರ್ ಕೇಳಿದ್ದಕ್ಕೆ ಯಾವ್ ಕ್ಯಾಸ್ಟು ಅಂತ ಕೇಳಿದ್ರು. 'ಎ' ಕ್ಯಾಸ್ಟು ಅಂದೆ, ಹೊಲಸೆಲ್ಲ ಕ್ಲೀನ್ ಮಾಡೋರಲ್ವಾ ಅದಕ್ಕೆ. ಏನ್ಮಾಡೋದು ಬಾಯಾರಿದಕ್ಕೆ ಅವ್ರು ಕೊಟ್ಟ ಚೆಂಬಲ್ಲೆ ಕುಡ್ದೆ. ನಾವು ಇದ್ದೂ ಇಲ್ದಂಗೆ ನಾವ್ ಕಸನೇ ಗುಡ್ಸ್‌ಬೋದು ನಮ್ಗು ಸ್ವಾಭಿಮಾನ ಐತೆ, ನಾವು ಮನುಷ್ಯರು. ನಮ್ ಕೆಲ್ಸ ಕೀಳಲ್ಲ. ಬೆಳ್ಗಿ ಬೆಳ್ಗೇನೇ ಬಂದ್ ಬಿಡ್ತೀವಿ. ನವಮ್ ವುಕ್ಳು ಸ್ಕೂಲಿಗೋದ್ವಾ ಬಿಟ್ವಾ ನೋಡೋರ್ಯಾರು. ಅವು ಸರ್ಯಾಗಿ ಓದಲ್ಲ ಅದ್ಕೆ ದೊಡ್ಡೋವಾದ್ಮೇಲೆ ನಮ್ಮಿಂದೇನೇ ಪರ್ಕೆ ಇಡ್ಕಂಡು ಬರ್ತವೆ. ವಯಸ್ಸಿಗೆ ಬಂದ್ ಮಕ್ಳು ಬಿಟ್ ಬರೋದೆಂಗೆ ? ಸ್ಲಂಲ್ಲಿ ಪೋಲಿ, ಪುಂಡ್ರು ಅದ್ಕೆ ಬೇಗ ಮದ್ವೆ ಮಾಡ್ ಬಿಡ್ತೀವಿ. ನಾವಿರೋ ಜಾಗ ಸರಿ ಇಲ್ಲ, ನೀರು, ಕಕ್ಕಸಿಗೆ ತೊಂದರೆ. ಕೆಲ್ಸ ಮಾಡೋ ಕಡೆ ನೀರ್ ಸಿಗಲ್ಲ ಅಂತಾನೆ ಎಲೆಡ್ಕೆ ಶುರು ಮಾಡಿದ್ದು. ಯಾವಾಗಾರು ಕುಡಿಯೋಕೆ ಒಂದ್ ಮನೇರು ನೀರ್ ಕೊಡ್ತಾ ಇದ್ರು. ಆ ಮನೆ ಅಜ್ಜ ಒಬ್ಬ ಯವ್ವ ಯವ್ವ ಅಂತ ಚೆನ್ನಾಗೆ ಮಾತಾಡುಸ್ತಾ ಇದ್ದಾ. ಒಂದಿನ ಕೆಲ್ಸ ಮುಗ್ಸಿ ಒಬ್ಳೆ ಓಗ್ತಾ ಇದ್ದೆ. ಆ ಮುದ್ಕಾ ಇಂದೇ ಇಂದೆನೆ ಬಂದ ಯಾರೂ ಇಲ್ದಿರೋ ಜಾಗ್ದಾಗೆ ಇಡ್ಕೊಳೋಕೆ ಬಂದ ಕೂಗಿ ಜನಸೇರ್ಸಿ ಮಾನ ಕಳಿತೀನಿ ಅಂದಿದ್ದಕ್ಕೆ ಕಾಲ್ಗೆಬೀಳ್ತೀನಿ ಅಂತ ಓಡ್ದ. ನಮ್ದು ಕಷ್ಟದ ಜೀವ್ನ. ಬರೋ ಸಂಬ್ಳದಲ್ಲಿ ಮಕ್ಳನ್ನ ಏನ್ ಓದ್ಸೋದು. ಅವು ಓದಿ ಚೆನ್ನಾಗಿ ಸಂಪಾದ್ನೆ ಮಾಡ್‌ಬೇಡ್ವಾ ? ಒಲ್ ಮಾದಿಗ್ರೆ ಯಾಕ್ ಗುಡ್ಸ್‌ಬೇಕು. ಈ ಕೆಲ್ಸಕ್ಕೂ ಒಳ್ಳೆ ಸಂಬ್ಳ ಕೊಡ್ಲಿ ಗ್ಲೌಸ್ ಗಂಬೂಟ್, ಎಲ್ಲಾ ಕೊಡ್ಲಿ, ಯೂನಿಫಾರಂ ಕೊಡ್ಲಿ, ಈ ಕೆಲ್ಸಾನೂ ಗೌರವದಿಂದ ನೋಡ್ಲಿ, ಅದ್ಕೆ ನಾವು ಒರಾಡ್ತಾ ಇರೋದು. ಕನಿಷ್ಟ ಕೂಲಿ ಬಂದ್ರೆ, ಎರಡೊತ್ತು ಊಟ ಮಾಡ್ತೀವಿ. ''ಗುಡ್ಸೊ ಜನಕ್ಕೆ ಸರಿಯಾದ ಕೂಲಿ ಕೊಡ್ದೆ ಇರೋ ಇವರೆಂತ ಮುಖ್ಯಮಂತ್ರಿ'' ಬೇರೆ ಜಾತಿಯೋರು ಬರ್ಲಿ ಈ ಕೆಲ್ಸ ಮಾಡೋಕೆ. ಈಗ್ಲೂ ಬೇರೆ ಜಾತಿಯೋರು ಇದಾರೆ ತುಂಬಾ ಕಮ್ಮಿ ನಾವು ಬೇಧ ಮಾಡ್ದೆ ಚೆನ್ನಾಗಿದೀವಿ.

ಪೆದ್ದಣ್ಣ : 94ರಿಂದ ಕೆಲ್ಸ ಮಾಡ್ತಾ ಇದೀನಿ. ಹೊಟ್ಟೆ ಪಾಡಿಗೆ ಬಂದೆ. ಬೇರೆ ಕೆಲ್ಸ ಆಭ್ಯಾಸ ಇಲ್ಲ. ಅದ್ಕೆ, ಈ ಕೆಲ್ಸಕ್ಕೆ ಬಂದೆ. ಧರ್ಮಾವರಂನಿಂದ ಬಂದೆ. ಅಲ್ಲಿ ಮಳೆ ಬೆಳೆ ಇಲ್ಲ. ಓನರ್‌ಗಳ್ಗೆ ಯಾರು ಏಳೋರು ಕೇಳೋರೆ ಇಲ್ಲ. ಅವರ್ಗೆ ಇಷ್ಟ ಬಂದಿದ್ದೆ ಕಾನೂನು ಕೊಡೋದು ಕಮ್ಮಿ ಸಂಬ್ಳ, ಇಂತ ತಾರೀಖಿಗೆ ಅಂತ ಕೊಡಲ್ಲ . 10ನೇ ತಾರೀಖಿನಿಂದ 15ರೊಳ್ಗೆ ಯಾವಾಗಾನ ಕೊಡ್ತಾರೆ. ಒಂದ್ ತಾವ ನಿಲ್ಸಿ ಒಂದ್ ಜಾಗ್ದಲ್ಲಿ ಕೊಡಲ್ಲ. ಸಂಬ್ಳ ಕೊಡೋದಕ್ಕೆ ಏನೊ ಕಾಡ್ ಇಲ್ಲ. ಆಫೀಸ್ನೋರು ಯಾರೂ ಸಂಬ್ಳ ಕೊಡ್ಸೋಕೆ ಬರೋದೆಯಿಲ್ಲ. ಯಾವಾಗ್ಲೋ ಒಂದ್ಸಾರಿ ಅವ್ರ ಮುಖ ನೋಡೋದು ಕೈಗೆ ಕಾಲ್ಗೆ ಏನೂ ಕೊಡಲ್ಲ ಬರಿಗೈಲೇ ಕೆಲ್ಸಾ ಮಾಡ್ಬೇಕು. ರಜೆ ಏನೂ ಇಲ್ಲ, ಮೂರ್ ದಿನ ರಜೆ ಆಕಿದ್ರೆ ಕೆಲ್ಸದಿಂದ ತಗ್ದಾಕ್ತಾರೆ. ದೊಡ್ಡೋರು ಯಾರಾದ್ರೂ ಬತ್ತರೆ ಅಂದ್ರೆ, ಏನಾರೂ ಪ್ರೋಗ್ರಾಂ ಇದ್ರೆ ಜಾಸ್ತಿ ಕೆಲ್ಸಾ ಮಾಡಿಸ್ತಾರೆ ಒಂದು ಕಾಪಿನೂ ಕೊಡಲ್ಲ, ನಮ್ ಕಷ್ಟಕ್ಕೆ ಅಂತ ಸಂಘ ಮಾಡ್ಕಂಡ್ರೆ ಇವ್ರಿಗೆ ಕಣ್ಣುರಿ, ಯಾವ ಮೀಟಿಂಗ್ಗೂ ಓಗ್ದಾರ್ದು ಎಂಗೋ ಕಂಡಿಡ್ಕಂಡು ಕೆಲ್ಸದಿಂದ ತಗಿತೀವಿ ಅಂತ ಬೆದರಿಸ್ತಾರೆ. ಹೊಸ ಸಂಬ್ಳ ಕೊಡಿ ಅಂಗಂತ ಕಾನೂನಾಗಿಲ್ವ, ಕೊಡ್ತೀವಿ ಅಂತ ನೀವೇ ಸೈನಾಕಿಲ್ವಾ ಅಂತ ಕೇಳಿದ್ರೆ '' ಯಾವೋನ್ ಬಂದ್ರು ಕೊಡಕಾಗಲ್ಲ ಅಂತಾರೆ''. ''ನೀವು ಎಲ್ಲೆಲ್ಲಿ ಬಿಲ ಕೊರಿತೀರೋ ಅದನ್ನೆಲ್ಲ ಮೆತ್‌ಕಂಡ್ ಬರ್ತೀವಿ. ನಮ್ ಅತ್ರ ಕಾಸಿದೆ'' ಅಂತರೆ. ನಾನು ಸಂಬ್ಳ ಜಾಸ್ತಿ ಕೇಳಿದ್ದಕ್ಕೆ, ಸಂಘಕ್ಕೆ ಓಗೋದಿಕ್ಕೆ ನನ್ನ ಕೆಲ್ಸದಿಂದ ಎತ್ತಿದ್ದು. ನಾನು ವಾಪಸ್ ಕೇಳ್ದೆ ಅಂಗಂತ ಬರ್ಕೊಡು ಅಂತ ಅವ್ರೆ ಒಂದ್ ಚೀಟಿನಾಗೆ ಮೇಲ್ನೋರು ಏಳಿರೋ ಅಂಗೆ ತಗ್ದಿದೀವಿ ಅಂತ ಬರ್ಕೊಟ್ಟವ್ರೆ. ಕೆಲ್ಸದಿಂದ ತಗ್ದಾಕೋದಲ್ದೆ ಸುತ್‌ಮುತ್ತ ವಾರ್ಡ್‌ಲ್ಲೆಲ್ಲೂ

ಕೆಲ್ಸ ಸಿಗ್ದಂಗೆ ಮಾಡ್ತಾರೆ. ನಾನು ಈಗ್ಲೂ ವಾರ್ಡ್ ಅತ್ರೋಗಿ ಯಾರ್ನಾದ್ರು ಮಾತಾಡ್ಸಿದ್ರೆ ಅವರ್ಗೂ ಎದ್ರುಸ್ತಾರೆ ನೀನ್ ಕೆಡೋದಲ್ದೆ ಎಲ್ರೂನು ಕೆಡ್ಸ್ತೀಯಾ ಅಂತರೆ. ಕೆಲ್ಸದಿಂದ ತೆಗ್ದ ಮೇಲೆ ಸಂಘಕ್ಕೆ ಕೆಲ್ಸ ಮಾಡ್ತಿದ್ದೀನಿ.

ಅಶೋಕ ದಳವಾಯಿ ಇದ್ದಾಗ 1550 ರೂಪಾಯಿ ಮಾಡಿದ್ರು, ಆದ್ರೆ ಕೊಡಲಿಲ್ಲ. 5 ಗಂಟೆವರ್ಗೂ ಮಾಡ್ಬೇಕು ಅಂದ್ರು. ಮಾಡಿದ್ರು ಕೊಡ್ಲಿಲ್ಲ. 45 ಜನಕ್ಕೆ 1800 ಕೊಡೊಕಾಗಲ್ಲ ಅಂತಾರೆ. ಅನ್ಯಾಯ ಅಂತ ಕೇಳೋರನ್ನೆ ತಗ್ದು ಹಾಕಿದ್ರು "ಕಮಿಷನ್ರುಗಳು ಬತ್ತರೆ ಒಯ್ತರೆ ಅವ್ರು ಟೆಂಪರರಿ ನಾವೇ ಪರ್ಮೆಂಟು" ಅಂತರೆ ಓನರ್‌ಗಳು.

ಶ್ರೀಲಕ್ಷ್ಮಿ : ಹೆಂಗ್ಸಾಗಿ ನಾನು ಮನೇಲೂ ದುಡಿಬೇಕು, ಹೊರಗೂ ದುಡಿಬೇಕು. ನಾನು 8 ವರ್ಷದಿಂದ ಕೆಲ್ಸ ಮಾಡ್ತಾ ಇದೀನಿ. 600 ರೂಪಾಯಿನಿಂದ ಶುರು ಮಾಡ್ದೆ. ಮನೇಲಿ ತಾಪತ್ರಯ ಇತ್ತು. ಏನೋ ಪರ್ಮೆಂಟ್ ಮಾಡ್ತೋದು ಅಂತ ಆಸೆ ಇತ್ತು. ಮನೆ ಕೆಲ್ಸ ಮಾಡಿದ್ರೆ ಯಾವಗಾದರು ತಗೀಬೋದು ಅಲ್ವಾ. ಮನೆಗೆಲ್ಸ ಶಕ್ತಿ ಇರೋಗಂಟ ಮಾಡ್‌ಬೋದು. ಈ ಕೆಲ್ಸ ಪರ್‌ಮೆಂಟ್ ಆದ್ರೆ ರಿಟೈರ್ಡ್ ಆದ್ರು ದುಡ್ ಬರುತ್ತೆ. ನಮ್ಗಿಲ್ಲ ಅಂದ್ರು ಮಕ್ಳಿಗೆ ಆಗುತ್ತೆ ಅಂದುಕೊಂಡಿದ್ದೆ. 6 ಜನ ಮಕ್ಳು ನಂಗೆ, ಗಂಡ ಪೇಂಟ್ ಮಾಡೋದು, 5 ವರ್ಷದಿಂದ ಬಿಟ್ಬೋಗಿದ್ದಾನೆ. ಮಕ್ಳುನ ಸಾಕೋಕೆ ಒಬ್ಳು ಸಂಬ್ಳದಿಂದ ಕಷ್ಟ. ಬರಿ ಈ ಕೆಲ್ಸದಿಂದ ಮನೆ ನಡ್ಯಲ್ಲ. ಮನೆಗೆಲ್ಸನೂ ಮಾಡ್ತೀನಿ. ಮೊದಲು ನಾನೇ ಎಲ್ಲಾ ಮಾಡಿಟ್ಟು ಬರ್ತಾ ಇದ್ದೆ. 3 ಗಂಟೆಗೆ ಏಳ್ತಾ ಇದ್ದೆ. ಮೇಸ್ತ್ರಿಗಳು ಒಟ್ಟೆಗೆ ಏನ್ ತಿಂತಿರಾ ಅಂತಾರೆ. ಯಾವೊಳು, ಅವ್ಳು, ಇವ್ಳು ಅಂತಾನೆ ಕರ್ಯೋದು. ಇನ್‌ಸ್ಪೆಟ್ರೆ ಅಂಗೆ ಮಾತಾಡ್ತಾರೆ. ರಸ್ತೇಲಿ ಪೋಲಿಗಳು ಇಡೀದಿನ ದುಡಿದರೆ 30–40 ಅಷ್ಟೇ ಸಿಗೋದು ನಮ್ಮತ್ರ ಬಾ 5 ನಿಮಿಷಕ್ಕೆ 100 ರೂಪಾಯಿ ಕೊಡ್ತೀವಿ ಅಂತಾರೆ. ಸ್ವಲ್ಪ ಚೆನ್ನಾಗಿರೋ ಹೆಂಗಸುರ್ಗೆ, ವಯಸ್ಸಿರೋ ಎಂಗುಸ್ರುಗೆ ಜಾಸ್ತಿ ಕಾಟ. ಮನೇಲಿರೋ ಗಂಢಸ್ರು, ತರೋ 20 ರೂಪಾಯಿ ಸಂಬಳಕ್ಕೆ ಬೆಳ್ಗೆ 5 ಗಂಟೆಗೆ ಹೋಗಿ ಸಾಯಂಕಾಲ 4 ಗಂಟೆಗೆ ಬರ್ತಾಳೆ ಅಂತಾರೆ. ಗಂಡ, ಮನೆ ಮಾರಿ ಸಾವಿರಾರು ರುಪಾಯಿ ಸಾಲ ಬಿಟ್ಟೋದ. ಕಷ್ಟ ಪಟ್ಟು ತೀರಿಸ್ತಾ ಇದೀನಿ. ಇನ್ನೂ ಬಾಕಿ ಐತೆ. ಹೆರ್ಗೆ ಆದಾಗೂ ಕೂಡ 5 ದಿವಸಕ್ಕೇ ಮನೆಗೆಲ್ಸ ಮಾಡೋಕೆ ಓಗಿದೀನಿ. ಗಂಡ ಇನ್ನೊಂದು ಮದ್ವೆ ಮಡ್ಕೊಂಡಿದಾನೆ. ನಾನೆ ಬರ್ಬೇಡ ಅಂದೆ. ಮನೆ ಹತ್ರ ಸಾಲ್ದೋರು ಬರ್ತಾರೆ ಅಂತ ಬೇಡ ಅಂದೆ. ನಾನು ಅಸ್ಕೊಂಡಿದ್ರು ಸಾಲ ಮಾಡೋಳಲ್ಲ. ಬಡ್ಡಿ ಕೊಡೋಕಾಗಲ್ಲ ಅಂತ ಅಸ್ಲು ತೀರಿಸ್ದೆ.

ಹೆಂಗಸರಿಗೆ ಕಕ್ಕಸ್ಸು ಇಲ್ದೆ ಇರೋದು ಸ್ಯಾನೆ ತೊಂದ್ರೆ. ತಿಂಗ್ಳು ತೊಂದ್ರೆ ಬಂದ್ರೆ ಇನ್ನೂ ಕಷ್ಟ. ಹೆಂಗಸರಿಗೆ ಹೇಳ್ಕೊಳೋಕೆ ನಾಚ್ಕೆ. "ಏನ್ ಕಷ್ಟ ಬಂದರು ನಾನು ಯಾರತ್ರನೂ ಏಳ್ಕೊಳಲ್ಲ, ದೇವರತ್ರ ಮಾತ್ರ ಅತ್ಕೋತೀನಿ".

"3 ಜನದ ಕೆಲ್ಸ ಒಬ್ರೆ ಮಾಡ್ತೀವಿ. ಆದ್ರೆ ಸಂಬ್ಳ ಮಾತ್ರ ಒಬ್ರುದೇ ಸಿಗೋದು 3000 ಸಾವಿರದ ಕೆಲ್ಸ 300 ರುಪಾಯಿಗೆ ಮಾಡ್ತೀವಿ". ರಾಗಿ ಬಾಲು ಉಪ್ಸಾರು ಇರ್ಬೇಕು ನಮ್ಗೆ. ಗಟ್ಟಿಯಾಗ್ ಇರೋಕೆ, ಶಕ್ತಿ ಬೇಕಲ್ಲ ದುಡಿಯೋಕೆ.

ಆಂಜನೇಯಲು : ನಾವು ಮೊದ್ಲು ಪರ್ಮೆಂಟ್ ಸಂಘದೋರ ಜೊತೇಲಿ ಇದ್ವಿ. ಅವ್ರು ಕರೆಯೋ ಎಲ್ಲಾ ಮಿಟಿಂಗ್‌ಗೂ ಜನ ಕರ್ಕೊಂಡು ಒಗ್ತಾ ಇದ್ವಿ. ಗುತ್ಗೆ ಕಾರ್ಮಿಕರ ಸಂಬ್ಳ ಜಾಸ್ತಿ ಮಾಡುಸ್ತೀವಿ, ಪರ್ಮೆಂಟ್ ಮಾಡಿಸ್ತೀವಿ ಅಂದ್ರು, ಆದರೆ ಏನೂ ಆಗಿಲ್ಲ. ತುಂಬ ವರ್ಷ ಇದ್ವಿ ಅವರ ಜೊತೇಲಿ. 96ರಲ್ಲಿ ಪಾಂಡೆ ಅವ್ರು ಕಮೀಷನ್ರಾಗಿದ್ದಾಗ ಸಂಘ ಮಾಡ್ಕೊಂಡ್ವಿ. ಸ್ಯಾನೆ ದುಡ್ಡು ಕೈ ಬಿಟ್ಟೋಯ್ತು. ನಮ್ ಕಷ್ಟಕ್ಕೆ ನಾವೇ ಓರಾಡ್ಬೇಕು ಅಂತ ಸಾಲಸೋಲ ಮಾಡ್ಕೊಂಡು, ಒಡ್ವೆ ಅಡ ಇಟ್ಟು ಸಂಘ ಮಾಡಿದ್ವಿ. ನಮಗೆ ಓದಕೆ-ಬರೆಯೋಕೆ ಬರಲ್ಲ. ದುಡ್ಡಿರಲಿಲ್ಲ. ಸಂಘದ ಫೀಸು ಎತ್ತೋಕೂ ಕಷ್ಟ ಇತ್ತು. ಕೇಶವಾ ಅವ್ರು ಸಂಘಕ್ಕೆ ಬಂದ್ ಮ್ಯಾಲೆ ನಮ್ಗೆ ಬೇರ್ಬೇರೆ ಜನ ಪರ್ಚಯ ಆದ್ರು. ತುಂಬ ಜನ ನಮ್ಗೆ ಸಪೋರ್ಟ್ ಮಾಡಿದಿಕ್ಕೆ ನಮ್ಗೂ ಧೈರ್ಯ ಬಂದಿದೆ. ಬಾಬು ಮ್ಯಾಥ್ಯುಸ್ ಅವರು, ಬಾಲಕೃಷ್ಣ ಅವ್ರು ನಮ್ಮ ಸಂಘಕ್ಕೆ ತುಂಬಾ ಕೆಲ್ಸ ಮಾಡವ್ರೆ. ನಂಗೆ ತುಂಬಾ ಎದುರಿಸಿದ್ರು ಓನರ್‌ಗಳ ಕಡೆಯೋರು, ಕಾರ್ಪೋರೇಟ್ರು ಕಡೆವ್ರು. 5000 ಕೊಡ್ತೀವಿ, ಪೆಟ್ರೋಲ್ ಚಾರ್ಜ್ ಕೊಡ್ತೀವಿ ಅಂದ್ರು, ಲೋಕಲ್ ಗೂಂಡಾಗಳ ಕೈಲಿ ಒಡಸ್ಕೆ ನೋಡಿದ್ರು, ಏನೂಕ್ಕೂ ನಾನ್ ದೈರ್ಯ ಕಳ್ಕೊಂಡಿಲ್ಲ. ನಮ್ಮ ಸಮುದಾಯದ ಜನ್ಕೆ ಒಳ್ಳೆದಾಗೊದಾದ್ರೆ ನಾನು ಏನಾದ್ರೂ ಎದ್ರುಸ್ತೀನಿ.

ರಾಜು : ಒಂದಿನ ರಜ ಇಲ್ದೆ ಕೆಲ್ಸ ಮಾಡ್ತೀವಿ. ಪಲ್‌ಸ ಪೋಲಿಯೊ ಅಂತ ಪ್ರೋಗ್ರಾಂ ಆದ್ರೆ ಜಾಸ್ತಿ ಕೆಲ್ಸ ಮಾಡ್ತೀವಿ. ಅದ್ಕೆ ಅಂತ ಜಾಸ್ತಿ ಕಾಸೂ ಇಲ್ಲ. ರಜನೂ ಇಲ್ಲ. ನಮ್ಮ ವಾರ್ಡಲ್ಲಿ ಕಸಕ್ಕೆ ಬೆಂಕಿ ಕೊಡೋವಾಗ ಒಂದ್ ಅಮ್ಮಾ ಸುಟ್ಕೊಂಡು ಸತ್ತೋಯ್ತು. ಕಸದ ಲಾರಿ ಮೇಲೆ ಕುಂತಿದ್ದಾಗ ವೈರ್ ತಗ್ಲಿ ಒಬ್ಬ ಸತ್ತೋದ.

ಗಂಗಮ್ಮ : ಇವತ್ತು ಈ ಸಭೆ ಐತೆ ಅಂತ ಒನರ್‌ಗಳ್ಗೆಗೊತ್ತಾಗಿದೆ. ಅದ್ಕೇ ಸಂಬ್ಳ ಕೊಡ್ತೀವಿ ಅಂತ ನೆಪ ಮಾಡಿಕೊಂಡು ಲೇಟಾಗಿ ಬಿಟ್ರು. ಇಲ್ಗೆ ಬರ್‌ಬಾರ್ದು ಅಂತ ಕೊಟ್ಟಿರೋದು ಅಂಗೆ ಇಡ್ಕೊಂಡ್ ಬಂದಿದೀನಿ. ತೋರಸ್ಕೆ ಅಂತ. ಇಷ್ಟಲ್ಲಿ ಆರು ಜನ್ರ ಒಟ್ಟೆ ತುಂಬುತ್ತಾ?

ಮಲ್ಲಪ್ಪ: ನಮ್ಗೆ ಸಿಗ ಸಂಬ್ಳ ಸಾಕಾಗಲ್ಲ. ಸಂಸಾರ ನಡಿಬೇಕು ಅಂದ್ರೆ, ಮಕ್ಳು ಓದ್ ಬೇಕು ಅಂದ್ರೆ, ಬೇರೆ ಕಡೇನೂ ಕೆಲ್ಸ ಮಾಡ್ಬೇಕು. ಈ ಕೆಲ್ಸ ಮುಗ್ಸಿ ನಾನು ಹೋಟ್ಲು ಕೆಲ್ಸ ಮಾಡ್ತೀನಿ ರಾತ್ರಿ 12 ಗಂಟೆವರ್ಗೂ, ಮೈಗೆ ಉಷಾರಿಲ್ಲಜ್ವರ ಬಂದಿದೆ. ಸಂಬ್ಳ ಕಟ್ಟಾಗುತ್ತೆ ಅಂತ ರಜ ತಗಳಲ್ಲ.

ವೆಂಕಟಮ್ಮ : ನಂಗೆ ಕಣ್ಣಲ್ಲಿ ಯಾವಾಗೂ ನೀರ್ ಸುರಿಯುತ್ತೆ. ಡಾಕ್ಟ್ರುಗೆ ತೋರಿಸಿದ್ರೆ ಆಪ್ರೇಷನ್ ಆಗ್ಬೇಕು 2 ವಾರ ರಜ ತಗೋ

ಅಂತಾರೆ. ರಜ ಹಾಕುದ್ರೆ ಕೆಲ್ಸದಿಂದ ತಗಿತಾರೆ. ಇಷ್ಟು ಕಷ್ಟಪಟ್ ದುಡಿತೀವಿ ಸಂಬ್ಳ ಕೊಡೊಕೇನು ? ನಾವ್ ಸುಮ್ನೆ ಕೇಳ್ತಿವಾ ಕಷ್ಟ ಪಟ್ಟು ದುಡಿತಿವಿ ಅದ್ಕೆ ಸರ್ಯಾಗಿರೊ ಸಂಬ್ಳ ಕೊಡು ಅಂತೀವಿ. ಮಕ್ಳು ಸಾಕೋದು ಕಷ್ಟ ಆಗುತ್ತೆ. ಮನೆಕು ಬಾಡ್ಗಾನೇ ಸಾವುರ ಕೊಡ್ಬೇಕು. ಬಸ್‌ಚಾರ್ಜು 300 ರಿಂದ 400 ಆಗುತ್ತೆ. ಕಾರ್ಪೋರೇಟ್ರುಗಳು ಕಾಟ ನಮ್ಗೆ. ಓನರ್‌ಗಳು ಕಾರ್ಪೋರೇಷನ್ನೋರ್ಗೆ ಜಾಸ್ತಿ ದುಡ್ ತಿನ್ಸ್‌ಬೇಕು, ನಿಮ್ಗೆ ಜಾಸ್ತಿ ಸಂಬ್ಳ ಕೊಡೊಕೆ ಎಂಗಾಗುತ್ತೆ ಅಂತರೆ. ಪೂರ್ತಿ ಸಂಬಳ ಬೇಕಾದ್ರೆ ಸಂಘದವರ ಅತ್ರನೆ ತಗಳಿ ಅಂತರೆ.

ಕಸ್ತೂರಿ : 8 ವರ್ಷದಿಂದ 21ಎ ವಾರ್ಡ್‌ನಲ್ಲಿ ಕೆಲ್ಸ ಮಾಡ್ತೆ. ಸಂಘದಿಂದ ನಮ್ಗೆ ಅನ್‌ಕೂಲ ಆಗಿದೆ. ಸಂಘದಿಂದ ನಮ್ಗೆ ಧೈರ್ಯ ಬಂದಿದೆ. ಸ್ವಾಭಿಮಾನ ಬಂದಿದೆ. ಸಂಘಕ್ಕೆ ಹೋಗ್ತೀವಿ ಅನ್ನೋ ಕಾರಣಕ್ಕೆ ನಮ್ ವಾರ್ಡಿನ ಎಲ್ಲಾರ್ನು ಕೆಲ್ಸದಿದ ತೆಗ್ದು ಹಾಕಿದ್ರು. ಅಲ್ಲಿ ಕಾರ್ಪೋರೇಟ್ರು ಎಲ್ಲರ ಸಭೆ ಸೇರ್ಸಿ ಸಂಘ ಬಿಟ್ರೆ ಮಾತ್ರ ಕೆಲ್ಸದಲ್ಲಿ ಉಳಿಸೋದು ಅಂದಿದ್ರು. ನಾವು ಬಿಡ್ದೆ ತುಂಬಾ ಹೋರಾಡಿದ್ವಿ. ಅಟೆಂಡೆನ್ಸ್ ಆಕ್ತಾ ಇರ್ಲಿಲ್ಲ, ಬೇರೆಯೋರ್ನ ಕರ್ಕೊಂಡ್ ಬಂದ್ರು ಕೆಲ್ಸಕ್ಕೆ 'ನಾವು ಸುಮಾರು ದಿನ ತಡೆದ್ವಿ. ನಾವೇ ಗುಡ್ಸಿ ರಸ್ತೇನ್ ಗುಡಿಸಿರೋದಕ್ಕೆ ಮನೆಯವರ ಸೈನ್ ತಗೋತಿದ್ವಿ, ನಾವೆ ಅಟೆಂಡೆನ್ಸ್ ಆಕ್ಕೋತ್ತಿದ್ವಿ. ಲಾರಿ ಸ್ಟ್ರೈಕ್ ಆದಾಗ ನಮ್ಮ ಸಂಘದ ಅಧ್ಯಕ್ಷರೇ ಕಮಿಷನ್ರುಗೆ ಫೋನ್ ಮಾಡಿ, ಲಾರಿ ಕಳಿಸಿದ್ರೆ ನಾವೆ ಕಸ ತುಂಬಿ ಸಾಗಿಸ್ತೀವಿ ಅಂತ ಕೇಳಿದ್ರು. ನಾವು ನಿಷ್ಠೆಯಿಂದ ದುಡಿಯೋ ಜನ. ಅಲ್ಲಿರೊ ಜನ ನಮ್ಗೆ ಸಪೋರ್ಟ್ ಮಾಡ್ತಾರೆ. ನಮ್ ಸಂಘ ಮುರಿಬೇಕು ಅಂತಾನೆ ಓನರ್‌ಗಳು ನಮ್ಮನ್ನೆಲ್ಲ ಕೆಲ್ಸದಿಂದ ತಗುದ್ರು. ಆದ್ರೂ ನಾವ್ ಸೋಲ್ಲಿಲ್ಲ, ಕೆಲ್ಸ ಕಳ್ಕೊಂಡ್ವಿ. ಪರ್ವಾಗಿಲ್ಲ ನಾವು ದುಡಿಯೋ ಜನ ಎಲ್ಲಾದ್ರು ದುಡ್ದು ಅನ್ನ ಸಂಪಾದ್ನೆ ಮಾಡ್ಕೊತೀವಿ ಕೂತು ಉಣ್ಣೋ ಜನ ಅಲ್ಲ. ನಾವು ಕೆಲ್ಸ ಕಳ್ಕೊಂಡ್ರು ನಮ್ಗೆ ಬೇರೆ ಏನೇನೋ ಸಿಗ್ತು. ಹಲವಾರ್ ಜನ ಪರಿಚಯ ಆದರು. ಬೇರೆ ಬೇರೆ ಜನ ನಮ್ಮಂಗೆ ಹೋರಾಟ ಮಾಡ್ತಾ ಇರೋದು ಗೊತ್ತಾಯ್ತು. ನಮ್ಮ ಕೆಲ್ಸನ, ನಮ್ಮ ಹೋರಾಟನ ಗೌರವಿಸೊ, ಬೆಂಬಲಿಸೊ ಜನ ಇದಾರೆ ಅಂತ ಗೊತ್ತಾಯ್ತು. ಹೈದ್ರಾಬಾದ್‌ನ WSF ಮೀಟಿಂಗ್ ಹೋಗಿದ್ವಿ. ಬುಧವಾರದ ಸಭೇಲಿ ಅನೇಕ ವಿಷಯಗಳನ್ನು ಚರ್ಚೆ ಮಾಡ್ತೀವಿ. ಬೇರೆ ಬೇರೆ ಸಂಘಟನೆಯವ್ರು ನಮ್ಮ ಸಭೆಗೆ ಬಂದು ಮಾತನಾಡಿದ್ದಾರೆ. ಮುಂಬೈ ಪೌರಕಾರ್ಮಿಕರ ಸಂಘದ ಮಿಲಿಂದ್‌ರವರು ನಮ್ಮ ಸಭೆಗೆ ಬಂದಿದ್ರು. ಅಲ್ಲಿನ ಪೌರಕಾರ್ಮಿಕರಿಗೆ ಅವರು ಪರ್ಮನೆಂಟ್ ಮಾಡ್ಸಿದ್ದಾರೆ. ನಮ್ಮದೆ ಸ್ವ ಸಹಾಯ ಸಂಘ ಮಾಡ್ಕೊಂಡು ವಾರಕ್ಕೆ 10 ರೂಪಾಯಿ ಉಳಿತಾಯ ಮಾಡುತ್ತಿದ್ದೇವೆ. ಕಾರ್ಮಿಕರ ಸಮಸ್ಯೆಗಳ ಕುರಿತ ಸಿನಿಮಾಗಳನ್ನು ನೋಡಿದ್ದೇವೆ. ಸಂಘದ ಮೂಲಕ ಅನೇಕ ಸಂಘಟನೆಗಳ ಪರಿಚಯ ನಮಗೆ ಆಗಿದೆ. ನಾವೆ ಎದ್ದು ನಿಂತು ಗಟ್ಟಿಯಾಗಿ ನಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಬೇಕೆಂಬುದು ನಮ್ಮ ಉದ್ದೇಶ.

### ತೀರ್ಪುಗಾರರ ಪ್ರತಿಕ್ರಿಯೆಗಳು

ಓ ಶ್ರೀಧರನ್ : ಮಹಾನಗರ ಪಾಲಿಕೆಯು, ಗುತ್ತಿಗೆ ಕಾರ್ಮಿಕ ಕಾಯ್ದೆಯ 21 ನೇ ಸೆಕ್ಷನ್‌ನ ಉಪ-ಸೆಕ್ಷನ್ 4ರನ್ವಯ ಪೂರ್ಣವೇತನ ಅಥವ ಬಾಕಿ ವೇತನವನ್ನು ಪಾವತಿಸಿ, ಅದನ್ನೇ ಗುತ್ತಿಗೆ ದಾರರಿಗೆ ಪಾವತಿಸಬೇಕಾದ ಬಿಲ್‌ನಿಂದ ಕಡಿತಗೊಳಿಸಬಹುದು. ಪಾವತಿಸದಿರದವರ ವಿರುದ್ಧ ಸೆಕ್ಷನ್ 26ರ ಪ್ರಕಾರ ಕಾರ್ಮಿಕರು ಕ್ರಿಮಿನಲ್ ಮೊಕದ್ದಮೆ ಹೂಡಬಹುದು. ಒಬ್ಬರೆ ಕಾರ್ಮಿಕರಿಗಿಂತ ಅವರ ಸಂಘದವರು, ಬೆಂಬಲಿಗರ ಸಹಕಾರದೊಂದಿಗೆ ಮೊಕದ್ದಮೆ ಹುಡುವುದು ಸೂಕ್ತ.

ಕೆಲಸ ಮಾಡುವ ಸ್ಥಳದಲ್ಲಿ ಮಹಿಳಾ ಕಾರ್ಮಿಕರ ಮೇಲೆ ನಡೆಯುವ ಲೈಂಗಿಕ ಕಿರುಕುಳ ಕುರಿತು ಕಾರ್ಮಿಕರು ಹೆಚ್ಚು ಪ್ರಸ್ತಾಪಿಸಿದರು. ಈ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಿ ತೀವ್ರ ಕ್ರಮ ಜರುಗಿಸಬೇಕು. ಕಿರುಕುಳ ಕೊಡುವವರನ್ನು ಅವರ ಕುಟುಂಬದವರು ಹಾಗು ಸಾರ್ವಜನಿಕರೆದುರು ಬಹಿರಂಗ ಪಡಿಸಬೇಕು. ಆ ನಂತರವೂ ಸುಧಾರಣೆಯಾಗದಿದ್ದರೆ ಮೇಲಾಧಿಕಾರಿಗಳಿಗೆ ದೂರು ನೀಡಬೇಕು. ಕಾನೂನಿನ ಕ್ರಮ ಜರುಗಿಸಿ ಶಿಕ್ಷೆಯಾಗುವಂತೆ ಮಾಡಬೇಕು.

ಕಾಯ್ದೆಯ ನಿಯಮ ಜಾರಿಗೊಳಿಸುವಲ್ಲಿ ಸಂಬಂಧಪಟ್ಟ ಆಡಳಿತ ವ್ಯವಸ್ಥೆ ಸಂಪೂರ್ಣವಾಗಿ ವಿಫಲಗೊಂಡಿರುವುದರಿಂದ ಸರ್ಕಾರಕ್ಕೆ ಮನವಿ ಮಾಡಿಕೊಂಡು, ಗುತ್ತಿಗೆ ಕಾರ್ಮಿಕ ಕಾಯ್ದೆಯ ಸೆಕ್ಷನ್ 4ರ ಪ್ರಕಾರ ರಾಜ್ಯ ಗುತ್ತಿಗೆ ಕಾರ್ಮಿಕ ಸಲಹಾ ಮಂಡಳಿಯನ್ನು ಸ್ಥಾಪಿಸಲು ಒತ್ತಾಯಿಸಬೇಕು.

ಶಕ್ಕುನ್ : ಅಭಿವೃದ್ಧಿ, ಪ್ರಗತಿ ಎಂಬ ಪದಗಳು ಬಡವರನ್ನೂ ನಿರ್ಗತಿಕರನ್ನಾಗಿಸಿ ಕೆಲವೇ ಕೆಲವು ಬಲಾಢ್ಯರ ಸಂಪತ್ತು ಅಭಿವೃದ್ಧಿಯನ್ನು ಹೆಚ್ಚಿಸುವ ಯೋಜನೆಗಳಿಗೆ ಸಹಕಾರಿಯಾಗಿವೆ ಎಂಬುದು ಈ ದಿನ ನಮ್ಮ ಮುಂದಿಟ್ಟಿರುವ ಸತ್ಯಕತೆಗಳಿಂದ ಸಾಬೀತಾಗಿದೆ. ಅಸಮಾನತೆ, ಅಸ್ಪೃಷ್ಯತೆ ಮತ್ತು ಶೋಷಣೆ ಎಂಬ ಹಳೆ ಸಾಮಾಜಿಕ ರೋಗಕ್ಕೆ ಜಾಣ ಕುರುಡು ತೋರುವವರ ಬಣ್ಣ ಬಯಲು ಮಾಡಿದ್ದಾರೆ.

ಕಾರ್ಯಕ್ರಮದಲ್ಲಿ ಕಷ್ಟವಾದರೂ ಭಾಗಿಯಾಗಿ ಅವರ ಮೇಲಾಗುತ್ತಿರುವ ಅನ್ಯಾಯವನ್ನು ಹಂಚಿಕೊಳ್ಳುವ ಮೂಲಕ ಈ ಕಾರ್ಮಿಕರು ಸಂಘವನ್ನು ಬಲಪಡಿಸಿದ್ದಾರೆ. ಸತ್ಯವನ್ನು ನಮ್ಮ ಮುಂದಿಟ್ಟು, ಸರ್ಕಾರ ಮತ್ತು ಗುತ್ತಿಗೆದಾರರೊಂದಿಗೆ ಸಂಧಾನ ನಡೆಸುವ ಮೂಲಕ ಅನ್ಯಾಯವನ್ನು ಸರಿಪಡಿಸಲು ಬೆಂಬಲಿಸಬೇಕೆಂದು ಕೋರಿದ್ದಾರೆ. ನಾವು ಅವರ ನಿರೀಕ್ಷೆಯನ್ನು ಹುಸಿಯಾಗಿಸಬಾರದು.

ಹೇಮಲತಾ ಮಹಿಷಿ : ನಮಗೆ ಬೇಕಾಗಿರುವುದು ಹಿಟ್ಟು, ಬಟ್ಟೆ, ಮಲಗಲು ಜಾಗ, ಅದಕ್ಕಿಂತ ಹೆಚ್ಚಿನದನ್ನು ಬಯಸುವುದಿಲ್ಲ. ಸಂಘದಿಂದ ಹೋರಾಟದಿಂದ ನಮಗೆ ಸಹಾಯವಾಗಿದೆ. ನಾವು ಹೋರಾಟ ಮುಂದುವರಿಸುತ್ತೇವೆ ಎನ್ನುವ ಅವರ ಛಲದ ಮಾತು

ಅವರ ಧೈರ್ಯದ ಸಂಕೇತ. ಜಯಮ್ಮ ಅಂಜನೇಯಲು, ಶ್ರೀಲಕ್ಷ್ಮಿ ವೆಂಕಟಮ್ಮ, ಪೆದ್ದಣ್ಣ, ಕಸ್ತೂರಿ, ಗಂಗಮ್ಮ, ಶಾರದಮ್ಮ, ನರಸಯ್ಯ ಪ್ರತಿಯೊಬ್ಬರೂ ಯಾವ ನಾಯಕರಿಗೂ ಕಡಿಮೆ ಇಲ್ಲದವರು. ಕೆಲಸ ಕಳೆದುಕೊಂಡರೆ ಅಂದಿನಿಂದಲೇ ಹೊಟ್ಟೆಗಿಲ್ಲದೇ ಉಪವಾಸವಿರಬೇಕಾದ ಇವರು ಬೇರೆಯ ನಾಯಕರಿಗಿಂತ ಹೆಚ್ಚಿನವರು.

ಪೌರ ಸಭೆಗಳು ಕಾಂಟ್ರಾಕ್ಟರ್ ಮೇಲೆ ಜವಾಬ್ದಾರಿ ಹೊರಿಸಿ ಕೈಚೆಲ್ಲಿ ಕುಳಿತಿವೆ. ಮುಖ್ಯಮಂತ್ರಿಗಳು ಇದರ ಇಲಾಖಾ ಜವಾಬ್ದಾರಿ ಹೊಂದಿದ್ದಾರೆ. ಬೆಂಗಳೂರಿನಲ್ಲಿಯೇ ಕಾರ್ಮಿಕರು ಖಾಸಗಿ ಕಾಂಟ್ರಾಕ್ಟರ್‌ಗಳ ಶೋಷಣೆಗೆ ಒಳಗಾಗಿದ್ದಾರೆ. ಸರ್ಕಾರ ಪೌರಸಭೆಗಳು ಎಚ್ಚೆತ್ತು ತಮ್ಮ ಜವಾಬ್ದಾರಿಯೂ ಇದರಲ್ಲಿದೆ ಎಂದು ಅರಿತುಕೊಂಡರೆ ಸಮಸ್ಯೆ ಸ್ವಲ್ಪವಾದರೂ ಬಗೆಹರಿದೀತು. ಜನತಾ ನ್ಯಾಯಾಲಯ ಖಂಡಿತವಾಗಿಯೂ ಈ ದಿಸೆಯಲ್ಲಿ ಒಂದು ಮುಖ್ಯ ಹೆಜ್ಜೆಯಾಗಿದೆ. ಇದರ ಫಲಶೃತಿಯಾಗಿ ಕೆಲವೊಂದು ಅಶ್ವಾಸನೆಗಳು ಲಭಿಸಿವೆ. ಅವು ಕಾರ್ಯಗತವಾಗುವವರೆಗೆ ಇಂತಹ ಹೋರಾಟ ಮುಂದುವರಿಯುವ ಅವಶ್ಯಕತೆ ಇದೆ.

ಕಾತ್ಯಾಯಿನಿ ಚಾಮರಾಜ್ : ಅತ್ಯಂತ ಕೆಳಸ್ತರದಿಂದ ಬಂದಿರುವ ಈ ಮಹಿಳೆಯರು ಅತಿ ಕಡಿಮೆ ಸಂಬಳದ ಜೊತೆಗೆ ಜಾತಿ, ಲಿಂಗ, ವರ್ಗ ಮೂರು ರೀತಿಯ ತಾರತಮ್ಯವನ್ನನುಭವಿಸುತ್ತಾರೆ. ಇಷ್ಟೊಂದು ಹಸಿವೆ, ಬಡತನ ಎದುರಿಸಿಯೂ ಹೋರಾಡುವ ಶಕ್ತಿಯನ್ನುಳಿಸಿಕೊಂಡಿರುವುದು ಆಶ್ಚರ್ಯಕರ.

ನಿರಂತರವಾಗಿ ನಡೆಯಬೇಕಾದ ಕೆಲಸವನ್ನು ಗುತ್ತಿಗೆಗೆ ನೀಡಿರುವುದು ಗುತ್ತಿಗೆ ಕಾರ್ಮಿಕ ಕಾಯ್ದೆ (ನಿಯಂತ್ರಣ ಹಾಗು ರದ್ದತಿ)ಗೆ ವಿರುದ್ಧವಾಗಿದೆ ಎಂದು ಹಲವು ಕಾನೂನು ತಜ್ಞರು ಗುರುತಿಸಿದ್ದಾರೆ. ಪಾಲಿಕೆಯು ನಿರಂತರವಾಗಿ ಕಾನೂನು ಬಾಹಿರ ಕೆಲಸ ಮಾಡುತ್ತ ಬಂದಿದೆ. ಕಾರ್ಮಿಕ ಇಲಾಖೆಯು ಸಹ ಗಮನಿಸದೆ ಕಣ್ಣು ಮುಚ್ಚಿ ಕುಳಿತಿದೆ. ಕಾಯ್ದೆಯನ್ವಯ ದೊರಕಬೇಕಾಗಿದ್ದ ಸೌಲಭ್ಯಗಳಿಂದ ಕಾರ್ಮಿಕರನ್ನು ವಂಚಿಸುತ್ತಿರುವ ಗುತ್ತಿಗೆದಾರರ ವಿರುದ್ಧ ಮುಖ್ಯ ಉದ್ಯೋಗ ಸಂಸ್ಥೆಯಾಗಿ ಕ್ರಮ ಜರುಗಿಸದಿರುವ ಪಾಲಿಕೆಯ ಮೇಲೆ ಕಾರ್ಮಿಕ ಇಲಾಖೆಯು ಯಾವ ಒತ್ತಡವನ್ನು ತಂದಿಲ್ಲ.

ಬೆಂಗಳೂರು ಸಿಂಗಪೂರವಾಗಬೇಕು. ಅಲ್ಲಿನ ಫ್ಲೈಓವರ್‌ಗಳ, ಪಾರ್ಕುಗಳ ದೃಷ್ಟಿಯಿಂದ ಮಾತ್ರವಲ್ಲ, ನಾಗರೀಕ ಪ್ರಜ್ಞೆ ಇರುವ ಮತ್ತು ನಗರದ ಬಗ್ಗೆ ಹೆಮ್ಮೆ ಇರುವ ಜನಗಳುಳ್ಳ, ಸ್ವಯಂ ಪ್ರೇರಣೆಯಿಂದ ಕಾನೂನು ಪಾಲಿಸುವ ಗುತ್ತಿಗೆದಾರರಿರುವ, ನಿರ್ದಾಕ್ಷಿಣ್ಯವಾಗಿ ಕಾನೂನು ಜಾರಿಗೊಳಿಸುವ ಅಧಿಕಾರಿಗಳಿರುವ ಸಿಂಗಪೂರವಾಗಬೇಕು. ಬದುಕುವ ಹಕ್ಕು, ಘನತೆಯ ಹಕ್ಕು, ಜೀತದಿಂದ ಮುಕ್ತವಾದ ಕಡಿಮೆ ಖರ್ಚು ಲಾಭಕ್ಕಿಂತ ಸಾಮಾಜಿಕ ನ್ಯಾಯ ಮುಖ್ಯವಾಗಿರುವ ಸಿಂಗಪೂರವಾಗಬೇಕು.

ಶ್ರೀ ಗೋಡ್‌ಬೋಲೆ : ಈ ದಿನದ ಜನತಾ ನ್ಯಾಯಾಲಯಕ್ಕೆ ಸರ್ಕಾರದ ಪರವಾಗಲಿ, ಬೆಂಗಳೂರು ಮಹಾನಗರ ಪಾಲಿಕೆಯ ಪರವಾಗಲಿ, ಕಾರ್ಮಿಕ ಇಲಾಖೆಯ ಪರವಾಗಲಿ ಯಾರೂ ಬಂದಿಲ್ಲ. ಅವರುಗಳ ಗೈರು ಹಾಜರಿಯಲ್ಲಿ ತೀರ್ಪನ್ನು ಮಂಡಿಸಿ ಅವರಿಗೆ ನೋಟೀಸ್ ಕಳಿಸಬೇಕು. ಎಲ್ಲ ನಿಯಮಗಳನ್ನು ಮತ್ತು ಕಾನೂನುಗಳನ್ನು ಅವರು ಉಲ್ಲಂಘಿಸಿದ್ದಾರೆ. ಸರ್ಕಾರವು ಮಾಡಿರುವ ಕಾನೂನನ್ನು ಜಾರಿಗೊಳಿಸುವಲ್ಲಿ ಕಾರ್ಮಿಕ ಇಲಾಖೆಯು ವಿಫಲವಾಗಿದೆ. ತಮ್ಮದೇ ಕಾನೂನು, ಗೆಜೆಟ್ ನೋಟಿಫಿಕೇಶನ್ ಜಾರಿಗೊಳ್ಳದಿರುವ ಬಗ್ಗೆ ಸರ್ಕಾರ ಕುರುಡಾಗಿದೆ. ಪಾಲಿಕೆಯು ಗುತ್ತಿಗೆ ಪೌರಕಾರ್ಮಿಕ ಕಾಯ್ದೆಯನ್ನು ಗಾಳಿಗೆ ತೂರಿದೆ.

ನೀವೆಲ್ಲರು ನಿರಂತರವಾಗಿ ಹೋರಾಡುತ್ತಿದ್ದೀರಿ. ನಾವು ನಿಮ್ಮ ಹೋರಾಟವನ್ನು ಬೆಂಬಲಿಸುವ ಅಗತ್ಯವಿದೆ. ಉಪವಾಸ ಸತ್ಯಾಗ್ರಹದಂತಹ ಕಾರ್ಯಕ್ರಮವನ್ನು ಹಮ್ಮಿಕೊಂಡು ಹೋರಾಟವನ್ನು ತೀವ್ರಗೊಳಿಸಬೇಕಾಗಿದೆ.

ಕೊ. ಚೆನ್ನಬಸಪ್ಪ : ನಾನು ಇಲ್ಲಿ ಬಂದಿರುವುದರಿಂದ ನಿಮಗೆ ಸಹಾಯವಾಗುತ್ತದೋ ಏನೋ ಗೊತ್ತಿಲ್ಲ. ಆದರೆ ನಾವಿಲ್ಲ ಬಂದಿದ್ದರಿಂದ ನನಗೆ ಅನುಕೂಲವಾಗಿವೆ. ಬಹಳಷ್ಟು ಕಲಿತುಕೊಂಡೆ. ಕೋರ್ಟಿನ ತೀರ್ಪಿದೆ, ಗೆಜೆಟ್ ನೋಟಿಫಿಕೇಶನ್ ಇದೆ, ಆದರೂ ಕನಿಷ್ಟವೇತನ ಸಿಕ್ಕಿಲ್ಲ. ಕಾನೂನಿನ ಕ್ರಮ ಜರುಗಿಸಲು ಗಟ್ಟಿಯಾದ ಅವಕಾಶವಿದೆ. ಈ ರೀತಿ ಅನ್ಯಾಯವಾಗುತ್ತಿರುವುದಕ್ಕೆ ಗುತ್ತಿಗೆದಾರರ ಅಮಾನವೀಯತೆಯೇ ಕಾರಣ. ಈ ಅಮಾನವೀಯತೆ ಅವರಿಗಷ್ಟೇ ಅನ್ವಯಿಸದೆ ಇಡೀ ಸಮಾಜಕ್ಕೆ ಅನ್ವಯಿಸುತ್ತದೆ.

ಪ್ರೊ॥ ಹಸನ್ ಮನ್ಸೂರ್

''ಮೂಲಭೂತವಾಗಿ ಈ ಸಮಸ್ಯೆ ಮಾನವಹಕ್ಕುಗಳಿಗೆ ಸಂಬಂಧಪಟ್ಟದಾಗಿದೆ. ಪ್ರತಿಯೊಬ್ಬರಿಗೂ ಕೆಲಸ ಮಾಡುವ ಹಕ್ಕಿದೆ. ಕಾರ್ಮಿಕರಿಗೆ, ಸೂಕ್ತ ವೇತನ ಮತ್ತು ಉತ್ತಮ ಕೆಲಸದ ವಾತಾವರಣವನ್ನು ಕೇಳುವ ಹಕ್ಕಿದೆ''. ಮಾನವ ಹಕ್ಕುಗಳಿಗಾಗಿ ಹೋರಾಡುವ ಕಾರ್ಯಕರ್ತರಾಗಿ ನಮಗೆ ನಿಮ್ಮ ಪರಿಸ್ಥಿತಿಯ ಅರಿವಿದೆ. ನಾವು ನಿಮ್ಮನ್ನು ಸಂಪೂರ್ಣವಾಗಿ ಬೆಂಬಲಿಸುತ್ತೇವೆ.

ಪ್ರತಿಭಟನಾ ಮೆರವಣಿಗೆ

ಜನತಾ ನ್ಯಾಯಾಲಯದ ಕಾರ್ಯಕ್ರಮದ ನಂತರ, ಮುಖ್ಯಮಂತ್ರಿಗಳ ನಿವಾಸದವರೆಗೂ ಪ್ರತಿಭಟನಾ ಮೆರವಣಿಗೆಯನ್ನು ಹಮ್ಮಿಕೊಳ್ಳಲಾಗಿತ್ತು. ಮುಖ್ಯಮಂತ್ರಿಗಳಿಗೆ ಬಿಡುವಿಲ್ಲದಿದ್ದರಿಂದ ಅವರನ್ನು ಭೇಟಿಯಾಗಲು ಸಾಧ್ಯವಿಲ್ಲವೆಂದು ಪೋಲಿಸರು ಹೇಳಿದರು. ಕಾರ್ಮಿಕರು ಪಟ್ಟು ಬಿಡದೆ ಕೂತಾಗ 13 ನೇ ತಾರೀಖಿನಂದು ಸಂಘದ ಪ್ರತಿನಿಧಿಗಳು ಬೆಂಗಳೂರು ಅಭಿವೃದ್ಧಿ ಸಚಿವರಾದ ಶ್ರೀ ರಾಮಲಿಂಗರೆಡ್ಡಿಯವರನ್ನು ಬಂದು

ಕಾಣಬಹುದೆಂಬ ಸೂಚನೆ ಬಂತು. ಕಾರ್ಮಿಕರು ಕದಲದೆ ಕೂತರು. ವಿಷಯದ ತುರ್ತನ್ನರಿತ ಸಚಿವರು ಕೇವಲ ಐದು ಜನರನ್ನು ಕರೆದುಕೊಂಡುಬರಲು ಪೋಲಿಸರಿಗೆ ತಿಳಿಸಿದರು. ಹೇಳ ಬೇಕಿರುವುದನ್ನು ಕಾರ್ಮಿಕರಿದ್ದಲ್ಲಿಗೆ ಬಂದು ಹೇಳಬೇಕೆಂಬ ಒತ್ತಡಕ್ಕೆ ಮಣಿದ ಸಚಿವರು ಹೊರ ಬರಲೇ ಬೇಕಾಯಿತು. ಕನಿಷ್ಟ ವೇತನ ರೂ 1800/-ನ್ನು ಖಡಾ ಖಂಡಿತವಾಗಿ ಕೊಡಿಸುವುದಾಗಿ ಸಚಿವರು ಆಶ್ವಾಸನೆ ಇತ್ತರು.

ಇಂತಹ ಆಶ್ವಾಸನೆಗಳ ನಿಜ ಅರ್ಥ ತಿಳಿದ ಕಾರ್ಮಿಕರು ಸಾರ್ವಜನಿಕರೆದುರು ಕನಿಷ್ಟ ವೇತನ ಕೊಡಿಸುವ ಜವಾಬ್ದಾರಿ ಹೊತ್ತುಕೊಳ್ಳಲಿ ಎಂಬ ಉದ್ದೇಶದಿಂದ ಫೆಬ್ರವರಿ 10 ರಂದು ವಿಶೇಷ ಸಮಾವೇಶವನ್ನು ವ್ಯವಸ್ಥೆ ಮಾಡಿದರು. ಮಾಜಿ ಗೃಹ ಸಚಿವರು, ಅಖಿಲಭಾರತ ಸಫಾಯಿ ಕರ್ಮಚಾರಿ ಸಂಘದ ಅಧ್ಯಕ್ಷರಾದ ಶ್ರೀ ಬೂಟಾಸಿಂಗರವರು ಕಾರ್ಯಕ್ರಮಕ್ಕೆ ಬರಲು ಒಪ್ಪಿಕೊಂಡರು. ಸಚಿವರಾದ ಶ್ರೀ ರಾಮಲಿಂಗರೆಡ್ಡಿ, ಪೋಲಿಸ್ ಆಯುಕ್ತರಾದ ಶ್ರೀ.ಮರಿಸ್ವಾಮಿ, ಅಗ್ನಿ ಪತ್ರಿಕೆಯ ಸಂಪಾದಕರಾದ ಶ್ರೀ ಶ್ರೀಧರ, ಹಿರಿಯ ಗಾಂಧಿವಾದಿಗಳಾದ ಶ್ರೀ ಎಲ್.ಸಿ.ಜೈನ್ ಕಾರ್ಮಿಕ ಮುಖಂಡರಾದ ಶ್ರೀ.ಗೋಡ್‌ಬೋಲೆ, ಖ್ಯಾತ ರಂಗಕರ್ಮಿಗಳಾದ ಪ್ರೋ॥ ಸಿ.ಜಿ. ಕೃಷ್ಣ ಸ್ವಾಮಿಯವರು, ಶ್ರೀ.ಅಶೋಕ್ ಸಾಲಪ್ಪ ಮುಂಬೈನ ಸಫಾಯಿ ಕರ್ಮಚಾರಿ ಸಂಘದ ಶ್ರೀ.ಮಿಲಿಂದ್‌ರವರು ವಿಶೇಷ ಅತಿಥಿಗಳಾಗಿ ಬಂದಿದ್ದರು. ಹೈದ್ರಾಬಾದ್‌ವರೆಗೂ ಬಂದಿದ್ದ ಶ್ರೀ ಬೂಟಾಸಿಂಗ್‌ರವರು ತುರ್ತು ಕೆಲಸದ ನಿಮಿತ್ತ ವಾಪಸಾದರು. ಕಾರ್ಯಕ್ರಮ ಯಶಸ್ವಿಯಾಗಲೆಂದು ಫ್ಯಾಕ್ಸ್ ಸಂದೇಶ ಕಳಿಸಿದರು. ಮಾನ್ಯ ಸಚಿವರು ಮತ್ತೊಮ್ಮೆ ಸಾರ್ವಜನಿಕ ಕಾರ್ಯಕ್ರಮದಲ್ಲಿ ಕನಿಷ್ಟ ವೇತನ ಕೊಡಿಸುವುದಾಗಿ ಭರವಸೆ ಇತ್ತರು. ಹಾಗೆಯೇ ಫೆಬ್ರವರಿ ತಿಂಗಳಿನಲ್ಲಿ ಪಾಲಿಕೆಯ ವಿಶೇಷ ಆಯುಕ್ತರಾದ ಸುಭಾಷ್ ಚಂದ್ರ ಅವರು ಖುದ್ದಾಗಿ ಕೆಲವು ವಾರ್ಡ್‌ಗಳಿಗೆ ಹೋಗಿ ಕನಿಷ್ಟ ವೇತನ ರೂ 1800/- ನ್ನು ಕಾರ್ಮಿಕರಿಗೆ ಕೊಡಿಸಿದರು. ಮಾರನೆಯ ದಿವಸ ವಿಶೇಷ ಆಯುಕ್ತರು ವೇತನ ಕೊಡಿಸುತ್ತಿರುವ ಫೋಟೊಗಳು ದಿನ ಪತ್ರಿಕೆಗಳಲ್ಲಿ ರಾರಾಜಿಸಿದವು. ಬಡ ದಲಿತ ಕಾರ್ಮಿಕರ ಬದುಕುಗಳು ರಾರಾಜಿಸಿದವೆಂದು ಕೊಂಡಿರಾ ? ಖಂಡಿತಾ ಇಲ್ಲ. ಪ್ರಕಾಶಿಸುವುದು ಭಾರತ ಮಾತ್ರವೆ ಹೊರತು ಇಲ್ಲಿನ ಬಡಜನರ ಬದುಕಲ್ಲ. ಸಂಬಳ ಕೊಡಿಸಿ ಫೋಟೊ ಹಿಡಿಸಿಕೊಂಡ ಅಧಿಕಾರಿಗಳು ಹೋದರು, ಹಿಂದಿನಿಂದ ಗುತ್ತಿಗೆದಾರರ ಚೇಲಾಗಳು, ಗೂಂಡಾಗಳು 200 ರಿಂದ 500 ರೂ ವರೆಗೆ ಕಿತ್ತುಕೊಂಡು ಹೋದರು. ಪ್ರತಿಭಟಿಸಿದರೆ ಕೆಲಸದಿಂದ ತೆಗೆಯುವುದಾಗಿ ಬೆದರಿಸಿದರು. ಕೇಳಲು ಹೋದ ಸಂಘದವರನ್ನು ಪೋಲಿಸ ಠಾಣೆಯಲ್ಲಿ ಸುಳ್ಳು ಕೇಸು ಹಾಕಿ ಕೂರುವಂತೆ ಮಾಡಿದರು. ಕಾರ್ಮಿಕರ ವಿರುದ್ಧ ಕಾರ್ಮಿಕರನ್ನು ಎತ್ತಿ ಕಟ್ಟುವ ಪ್ರಯತ್ನ ಮಾಡಿದರು. ಸಂಘದ ಸಭೆಗಳಿಗೆ ಹೋಗದಂತೆ ಕಾರ್ಮಿಕರನ್ನು ಹೆದರಿಸಿದರು. ಸುಲಿಗೆ ಕೋರ ಗುತ್ತಿಗೆದಾರರು, ಭ್ರಷ್ಟ, ನರಸತ್ತ ಅಧಿಕಾರಿಗಳಿಂದಾಗಿ ಬಡ ಕಾರ್ಮಿಕರ ಕೈಗೆ ಬಂದ ಕನಿಷ್ಟ ವೇತನ ಬಂದಷ್ಟೇ ಬೇಗ ಹೋಯಿತು. ಪ್ರತಿ ತಿಂಗಳು ಹಿಂತಿರುಗಿಯೂ ಹೋಗುತ್ತಿದೆ. ಬಡವರ ಬೆವರಲಿ ಸುಲಿಗೆ ಕೋರರು ಮಿಂಚುತ್ತಿದ್ದಾರೆ. ಹೊಲಸು ನಾರುತ್ತಿರುವ ಪಾಲಿಕೆಯ ಅಧಿಕಾರಿಗಳು, ಸದಸ್ಯರುಗಳು, ಗುತ್ತಿಗೆದಾರರು. ಬಡವರ ಕನಿಷ್ಟ ಕೂಲಿಗೂ ಬಾಯ್ತೆರೆದು ಕೂತಿದ್ದಾರೆ. ಎಲ್ಲಾ ಬೆದರಿಕೆ, ಹೊಡೆದಾಟದಲ್ಲಿಯೂ 4ಇ ವಾರ್ಡಿನ ಕಾರ್ಮಿಕರು ಜಗ್ಗದೆ ಪಟ್ಟು ಹಿಡಿದು ರೂ 1800/- ನ್ನೂ ತೆಗೆದುಕೊಳ್ಳುತ್ತಿದ್ದಾರೆ. ಅಲ್ಲಿನ ಕಾರ್ಮಿಕರ ಹೋರಾಟದ ಚೈತನ್ಯವನ್ನು ಜೀವಂತವಾಗಿಡಲು ದುಡಿದವಳು ವೆಂಕಟಮ್ಮ. ಎರಡೂ ಕಣ್ಣಿನಲ್ಲಿ ನೀರು ಸುರಿಯುವ ಸಮಸ್ಯೆ ಇದೆ ವೆಂಕಟಮ್ಮನಿಗೆ, ವೈದ್ಯರು ಆಪರೇಷನ್ ಆಗಲೆ ಬೇಕು, ಎರಡುವಾರ ವಿಶ್ರಾಂತಿಯ ಅಗತ್ಯವಿದೆ ಎಂದು ಹೇಳಿ ಮೂರು ತಿಂಗಳಾಯಿತು. ಆಕೆ ಇನ್ನೂ ಆಪರೇಷನ್ ಮಾಡಿಸಿಕೊಂಡಿಲ್ಲ. ಕಾರ್ಮಿಕರನ್ನು ಎತ್ತಿಕಟ್ಟುತ್ತಾಳೆಂದು ಮಾಲೀಕರಿಗೆ ಆಕೆಯ ಮೇಲೆ ಕೆಂಗಣ್ಣು. 2 ದಿನ ರಜೆ ಹಾಕಿದರು ಕೆಲಸದಿಂದ ತೆಗೆದು ಹಾಕಿ ಬಿಡುತ್ತಾರೆ ಇನ್ನು ಎರಡು ವಾರ ರಜೆ (ಸಂಬಳವಿಲ್ಲದ) ಹೇಗೆ ಕೊಡುತ್ತಾರೆ ? ಎನ್ನುತ್ತಾಳೆ ವೆಂಕಟಮ್ಮ. ಸ್ವಾಭಿಮಾನ, ಆತ್ಮಗೌರವದ ಸಂಕೇತ ಈಕೆ. ಆ ವಾರ್ಡಿನಲ್ಲಿ ನಡೆದ ಘಟನೆಯೊಂದೆ ಸಾಕ್ಷಿ ಆಕೆ ಎಂತಹ ಆತ್ಮಗೌರವದ ಹೆಂಗಸು ಎನ್ನುವುದಕ್ಕೆ. ಆಯುಧ ಪೂಜೆಯಂದು ಗುತ್ತಿಗೆದಾರರು ಕಾರ್ಮಿಕರಿಗೆ ಸಿಹಿ ನೀಡುತ್ತಾರೆ ಬಕ್ಷೀಸು ನೀಡುತ್ತಾರೆ. 4C ವಾರ್ಡಿನ ಕಾರ್ಮಿಕರನ್ನು ಅವಮಾನಿಸಲೆಂದು ಗುತ್ತಿಗೆದಾರರು ಹುನ್ನಾರ ಮಾಡಿದರು. ಗಾಡಿಗಳನ್ನೆಲ್ಲ ತೆಗೆದು ಕೊಂಡು ಪಕ್ಕದ ವಾರ್ಡಿಗೆ ಬನ್ನಿ ಅಲ್ಲೆ ಪೂಜೆ ಮಾಡಿ ಎಂದರು. ಇವರೆಲ್ಲ ಗಾಡಿ ತಳ್ಳಿಕೊಂಡು ಹೋದರು. ಯಾರು ಇವರನ್ನು ಬಂದಿರಾ ಎಂದು ಕೇಳಲಿಲ್ಲ, ಪೂಜೆ ಮಾಡಿ ಎಂದು ಕೇಳಲ್ಲಿಲ. ಸ್ವಲ್ಪ ಹೊತ್ತು ನೋಡಿದ ವೆಂಕಟಮ್ಮ ನಡೀರೆ ಗಾಡಿ ತಗೊಂಡು ಎಂದು ಎಲ್ಲರನ್ನು ಕರೆದು ಕೊಂಡು ಬಂದೆ ಬಿಟ್ಟಳು. ಮಾರನೆಯ ದಿನ ಎಲ್ಲರಿಂದ 10 ರೂ ಸಂಗ್ರಹಿಸಿ, ಗಾಡಿ ತೊಳಿಸಿ ಪೂಜೆ ಮಾಡಿದರು, ಸಿಹಿ ತರಿಸಿದರು. ಮಾಲೀಕ ಬಂದ. ತಗಳಿ ಸಾಮಿ ಆರ್ತಿ ಎಂದು ತಟ್ಟೆ ಮುಂದಿಡಿದರು. ಮಾತನಾಡದೆ ಆತ 200 ರೂ ತಟ್ಟೆಗೆ ಹಾಕಿದ ಹೊರಡಲನುವಾದ, ಆಗ ವೆಂಕಟಮ್ಮ ಪುಟ್ಟ ಸಿಹಿ ಪೆಟ್ಟಿಗೆಯೊಂದಿಗೆ 50 ರೂ ಇಟ್ಟು ತಗಳಿ ಸಾಮಿ ಬಚ್ಚಿಸು ಅಂದ್ಲು ತೆಗೆದುಕೊಂಡ ಮಾಲೀಕ ತನ್ನ ಡ್ರೈವರ್‌ಗೆ ನೀಡಲು ಹೋದ. ಆಗ ಆಗ ವೆಂಕಟಮ್ಮ ಪುಟ್ಟ ಸಿಹಿ ಪೆಟ್ಟಿಗೆಯೊಂದಿಗೆ 50 ರೂ ಇಟ್ಟು ತಗಳಿ ಸಾಮಿ ಬಚ್ಚಿಸು ಅಂದ್ಲು ತೆಗೆದುಕೊಂಡ ಮಾಲೀಕ ತನ್ನ ಡ್ರೈವರ್‌ಗೆ ನೀಡಲು ಹೋದ. ಆಗ ಅವಳು 'ನಿಮ್ಗ ಸಾಮಿ ಕೊಟ್ಟದ್ದು ನೀವಂತೂ ಕೊಟ್ಟಲ್ಲ ಬಡವ್ರು ಪೂಜೆ ಮಾಡಿ ಕೊಟ್ಟದೀವಿ ತಗಳಿ' ಅಂದ್ಲು. ಸುಸ್ತಾದ ಮಾಲೀಕ 'ಮುಂದೆ ಹೀಗೆ ಮಾಡಲ್ಲ ಪ್ರತಿ ವರ್ಷದಂತೆ ನೀವೆ ನಿಮ್ಮ ವಾರ್ಡಿನಲ್ಲಿ ಪೂಜೆ ಮಾಡಿ, ಖರ್ಚು ಕೊಡುತ್ತೇನೆ ಎಂದ ಮುಂದೊಂದು ದಿವಸ ಭಾರತ ಬೆಳಗುವುದು ವೆಂಕಟಮ್ಮ ನಂತಹ ಚೈತನ್ಯಗಳಿಂದಲೆ !

## ಬಾಳಿನಾಸೆಯ ಬುತ್ತಿ ಹೊತ್ತವರು



ಹಗಲಿರುಳೆನ್ನದೆ ಮೈ ಬೆವರ ಸುರಿಸಿ
ರಕ್ತವ ಹರಿಸಿದರೂ
ತುತ್ತು ಅನ್ನ ಗೇಣುಬಟ್ಟೆಯು
ಕಾಣಲಾರದೆ ಹೋದೆವು ನಾವು

ಕಾಡು ಮೇಡುಗಳ ಅಲೆದು
ಕಲ್ಲು ಮುಳ್ಳುಗಳ ತುಳಿದು
ಬಾಳಿನಾಸೆಯ ಬುತ್ತಿಯ ಹೊತ್ತು
ಕಾಯಕವೇ ಕೈಲಾಸವೆಂದೆವು ನಾವು

ಚಿಂದಿ ಬಟ್ಟೆಯ ತೊಟ್ಟು
ಹರಕು ಹೊದಿಕೆಯ ಹೊದ್ದು
ಮುರುಕು ಚಾಪೆಯ ಮೇಲೆ ಮಲಗಿ
ಕನಸು ಕಾಣುವೆವು ನಾವು

## ಕಾಫಿ ಮಾರುವ ಹುಡುಗಿ

ನೆಟ್ಟ ಕಾಲಲ್ಲೆ ನಿಂತವಳೆ, ಅದೆಷ್ಟು ರಾತ್ರಿಗಳಿಡಿ
ಇರುವ ಒಂದೆ ಆಸ್ತಿಯಾದ
ಆ ತಳ್ಳು ಗಾಡಿಯ ಮುಂದೆ

ಸ್ಯೂಂಗುಟ್ಟುವ, ಬರ್‍ರ್ ಎನ್ನುವ ದಿನಕೆ ಮೂರಾವರ್ತಿ
ನಿಂತು ಹೊಗುವ ಆ ಸ್ಟವ್ವಿನ
ಡೊಲಾಯದ ಶಬ್ದಕ್ಕೆ
ತನ್ನ ದಿನಗಳನ್ನೆಲ್ಲಾ ಗಂಟು ಹಾಕಿದ್ದಾಳೆ

ಅಪ್ಪನಿಗೆ ಬಡಿದ ಲಕ್ವ, ತಮ್ಮ ನಿಗಿಡಿದ ವಯಸ್ಸಿನ ಭೂತ
ನಾಯಾಗಿ ಬೊಗಳಿ ಗೂಬೆಯಾಗಿ
ಕೂಗುವ ಅಜ್ಜಿ, ಇದಿಷ್ಟು ಅವಳ ಸಂಸಾರ

ದಿನಕ್ಕದೆಷ್ಟು ರಸಿಕ ಕಣ್ಣುಗಳು
ಕನಸು ಕಟ್ಟಿಕೊಂಡವೋ, ಅದೆಷ್ಟು ತೆವಲುಗಳು
ತ್ಯಾವೆಮಾತಾಡಿದವೋ
ಮಲ್ಲಿಗೆ, ಗುಲಾಬಿ, ಹಸಿರುಸೀರೆ
ಇವೆಲ್ಲಾ......, ಕಪ್ಪು, ಡಿಕಾಸನ್ನಿನ ಹಿಂದೆ ಕರಗುತ್ತಲೆ ಇವೆ
ಕಾಫಿ ಆಳತೆಯ, ಹಿಂದಿರುವ ಮನಸ್ಸು
ಮುಸುರೆ ತಿಕ್ಕಿದ ಕೈಗಳು, ಬಿಟ್ಟ ನಿಟ್ಟುಸಿರುಗಳು
ಲಚಗುಟ್ಟಿದ ತುಟಿಗಳು ಕಾತರಿಸಿದ ಕಣ್ಣುಗಳು
ಗೂಬೆ ಅಜ್ಜಿ, ಅಂಥ ಅಪ್ಪ, ಯಂತ ತಮ್ಮ
ಇದರೊಳಗೆ ಹುಡುಗಿ, ಹುಡುಗಿಯೊಳಗೆ ಇವು
ಸುತ್ತಲೂ ಡಿಕಾಸನ್ನು, ಸ್ಟವ್ವು, ಸ್ತ್ರೀ ಸ್ವತಂತ್ರ್ಯ, ಗಾಡಿ
ಮುಂತಾಗಿ......'
ಆ ಕಾಫಿ ಮಾರುವ ಹುಡುಗಿ

# ಮಹಿಳೆ ಮತ್ತು ಕಾರ್ಮಿಕ ಸಂಘಟನೆಗಳು

ವೃತ್ತಿಯಲ್ಲಿ ವಕೀಲರಾಗಿರುವ, 'New Trade Union Initiative" ಗುಂಪಿನಲ್ಲಿ ಸಕ್ರಿಯವಾಗಿರುವ ರೂಪಾರವರು ಬರೆದಿರುವ 'Women and Trade Unions' ಲೇಖನದ ಕನ್ನಡಾನುವಾದವನ್ನು ಓದುಗರಿಗಾಗಿ ಪ್ರಕಟಿಸಿದ್ದೇವೆ. ಸದ್ಯದ ಆರ್ಥಿಕ, ರಾಜಕೀಯ ಸಂದರ್ಭದಲ್ಲಿ ರೂಪಾರವರು ಎತ್ತಿರುವ ಗಂಭೀರ ಪ್ರಶ್ನೆಗಳನ್ನು ಚರ್ಚಿಸುವ ಅಗತ್ಯವಿದೆ. ಲೇಖಿನ ಕುರಿತ ತಮ್ಮ ಅಭಿಪ್ರಾಯಗಳನ್ನು ಬರೆದು ಕಳುಹಿಸಿದರೆ ಪ್ರಕಟಿಸುತ್ತೇವೆ. ಶುರುವಿಗೆ ಕಾ॥ವರಲಕ್ಷ್ಮಿಯವರ ಪ್ರತಿಕ್ರಿಯೆಯನ್ನು ಲೇಖನದೊಂದಿಗೆ ಪ್ರಕಟಿಸಿದ್ದೇವೆ. ಕಾ॥ವರಲಕ್ಷ್ಮಿಯವರು ಅಂಗನವಾಡಿ ಕಾರ್ಯಕರ್ತರ ಸಂಘಟನೆಯ ರಾಜ್ಯ ಕಾರ್ಯದರ್ಶಿಯಾಗಿದ್ದಾರೆ. ಹಾಗು CITUನ ಸಕ್ರಿಯ ಸದಸ್ಯರಾಗಿದ್ದಾರೆ.

ಕಾರ್ಮಿಕ ಸಂಘಟನೆಗಳಲ್ಲಿನ ಸ್ತ್ರೀ ಪುರುಷ ಸಮೂಹವನ್ನು ಪರಿಶೀಲಿಸುವಾಗ, ಮಹಿಳಾ ಕಾರ್ಮಿಕರು ಹಾಗು ಕಾರ್ಮಿಕ ಸಂಘಟನೆಗಳ (ಸಂಘಟಿತ ಮತ್ತು ಅಸಂಘಟಿತ ಎರಡೂ ಸೇರಿದಂತೆ) ಮೇಲೆ ಸ್ತ್ರೀವಾದದ ಪ್ರಭಾವವನ್ನು ಗಮನಿಸುವುದು ಸಮಂಜಸ.

ಉತ್ತರದ ಪ್ರಾಂತ್ಯಗಳಲ್ಲಿ ಕಾರ್ಮಿಕ ಸಂಘಟನೆಗಳ ಕುರಿತು ಅಧ್ಯಯನ ನಡೆಸಿರುವ ರೋಸ ಮೇರಿ ವಾರ್ಸ್‌ಕೆಟ್ ಅವರು ಕಾರ್ಮಿಕ ಸಂಘಟನೆ ಸ್ತ್ರೀವಾದ (union feminism) ರೂಪುಗೊಳ್ಳುವಿಕೆಯಲ್ಲಿ ಮೂರು ವಿಭಿನ್ನ ಪ್ರಭಾವಗಳನ್ನು ಗುರುತಿಸುತ್ತಾರೆ.

★ 1970 ದಶಕದಲ್ಲಿ ಬೆಳೆದು ಬಂದ ಸಮಾಜವಾದಿ ಸ್ತ್ರೀವಾದ

★ ಕಾರ್ಮಿಕ ಸಂಘಟನೆಯ ಮಹಿಳೆಯರು ನಡೆಸಿದ ಆರ್ಥಿಕ ಹೋರಾಟಗಳಿಂದ ರೂಪುಗೊಂಡ ದುಡಿಯುವ ವರ್ಗದ ಸ್ತ್ರೀವಾದ (working class feminism) - ಇದು ಕೆಲವು ದೇಶಗಳಲ್ಲಿ 60ರ ದಶಕದಲ್ಲೆ ಪ್ರಾರಂಭಗೊಂಡು, ಇಂದಿನವರೆಗೂ ಮುಂದುವರೆದುಕೊಂಡು ಬಂದಿದೆ.

★ 70 ಹಾಗು 80 ರ ದಶಕಗಳಲ್ಲಿ 'ಸಮಾನಾವಕಾಶ' ವನ್ನಾಧರಿಸಿ ಹಲವು ಉದಾರವಾದಿ ಪ್ರಜಾತಂತ್ರ ರಾಷ್ಟ್ರಗಳಲ್ಲಿ ಹುಟ್ಟಿಕೊಂಡ ಮುಖ್ಯವಾಹಿನಿ ಲಿಂಗರಾಜಕೀಯ (mainstream gender politics)

ರೋಸಮೇರಿಯವರ ಪ್ರಕಾರ ಕಾನೂನು ಹಾಗು ಸಂಘಟಿತ ಬೇಡಿಕೆಗಳನ್ನು ಪಡೆದುಕೊಳ್ಳುವ ಪ್ರಕ್ರಿಯೆಯಲ್ಲಿ ಸ್ತ್ರೀವಾದದ ಕೊಡುಗೆ ಬಹುಮುಖ್ಯವಾದುದು. ಹಲವಾರು ಸಂಘಟನೆಗಳ ಪ್ರಜಾಸತ್ತಾತ್ಮಕ ಕಾರ್ಯ ನಿರ್ವಹಣೆಯ ಮೇಲೆ ಸ್ತ್ರೀವಾದಿ ಪ್ರಜಾಸತ್ತಾತ್ಮಕ ಪ್ರಕ್ರಿಯೆಯ ಪ್ರಭಾವವನ್ನು ಕಾಣಬಹುದಾಗಿದೆ. ಸಂಘಟನೆಯ ನಾಯಕತ್ವದ ಮಟ್ಟದಲ್ಲಿ ಸ್ತ್ರೀಯರ ಭಾಗವಹಿಸುವಿಕೆ ಹೆಚ್ಚಾಗಿದೆ. ಹಾಗಾದರೂ ಸಹ ಮೂಲಭತವಾಗಿ ದುಡಿಯುವ ಸ್ಥಳ, ಸಮುದಾಯ ಹಾಗು ಸಮಾಜದ ದೃಷ್ಟಿಕೋನ ಕುರಿತಂತೆ ಯಾವ ಬದಲಾವಣೆಯನ್ನೂ ತರಲಿಲ್ಲ ಎಂಬುದನ್ನು ಆಕೆ ಖಡಾ ಖಂಡಿತವಾಗಿ ಹೇಳುತ್ತಾರೆ. ಸ್ತ್ರೀವಾದ ಹಾಗು ಕಾರ್ಮಿಕ ಚಳುವಳಿಯ ಸಂಯೋಗದಿಂದಾಗಿ ಕೆಲವು ಉತ್ತಮ ಬದಲಾವಣೆಗಳಾಗಿವೆಯೇ ಹೊರತು, ಸಮಾಜವಾದಿ ಸ್ತ್ರೀವಾದವು ಕಾರ್ಮಿಕ ಚಳುವಳಿಯನ್ನು ಬದಲಾಯಿಸುವಲ್ಲಿ ಯಶಸ್ವಿಯಾಗಲಿಲ್ಲವೆಂದು ಆಕೆ ವಾದಿಸುತ್ತಾರೆ.

ಭಾರತದೊಳಗೆ ಕಾರ್ಮಿಕ ಸಂಘಟನೆ ಸ್ತ್ರೀವಾದವು ಗಟ್ಟಿನೆಲೆ ಪಡೆದುಕೊಂಡಿಲ್ಲ. ಕೇಂದ್ರ ಕಾರ್ಮಿಕ ಸಂಘಟನೆಗಳು ಮಹಿಳೆಯರಿಗೆಂದೇ ಪ್ರತ್ಯೇಕ ಶಾಖೆ ಮಾಡಿದರು ಆದರೆ ಮಹಿಳಾ ಪ್ರಶ್ನೆಗಳಿಗೆ ಆದ್ಯತೆಯನ್ನೆ ನೀಡಲಿಲ್ಲ. ಅಥವಾ ಮಹಿಳಾ ಸದಸ್ಯತ್ವವನ್ನು ಹೆಚ್ಚಿಸಲು ಪ್ರಯತ್ನಿಸಿದ್ದಾರೆಯೇ ಹೊರತು ಸಂಘಟನೆಯೊಳಗೇ ಅವರ ಪರಿಣಾಮಕಾರಿ ಭಾಗವಹಿಸುವಿಕೆಗೆ, ಪ್ರತಿನಿಧಿತ್ವಕ್ಕೆ ಪ್ರಯತ್ನಿಸಲಿಲ್ಲ. ಈ ಕಾರಣದಿಂದಾಗಿಯೇ ಬಹುಪಾಲು ಮಹಿಳೆಯರು ಅಸಂಘಟಿತ ಆರ್ಥಿಕತೆಯಲ್ಲೇ ಉಳಿಯುವಂತಾಗಿದೆ. ಮಹಿಳೆಯರೇ ಹೆಚ್ಚಾಗಿರುವ ಅಸಂಘಟಿತ ಕ್ಷೇತ್ರದಲ್ಲಿ ಕಾರ್ಮಿಕ ಸಂಘಟನೆಗಳ ವೈಫಲ್ಯವನ್ನು ಸ್ಪಷ್ಟವಾಗಿ ಕಾಣಬಹುದು. ಸೇವೆ ಹಾಗು ಉದ್ದಿಮೆಯಂತಹ ಸಂಘಟಿತ ಕ್ಷೇತ್ರದಲ್ಲಂತೂ ಮಹಿಳೆಯರ ಸಂಖ್ಯೆ ನಗಣ್ಯ. ( ಎರಡನೆ ಕಾರ್ಮಿಕ ಆಯೋಗದ ವರದಿಯ ಪ್ರಕಾರ 1999ರಲ್ಲಿ ಸಂಘಟಿತ ಕ್ಷೇತ್ರದಲ್ಲಿನ ಮಹಿಳೆಯರ ಸಂಖ್ಯೆ ಶೇ 17 ಮಾತ್ರ) ಈ ಮಹಿಳೆಯರೂ ಸಹ ವರ್ಗ ಹಾಗು ಆರ್ಥಿಕತೆಯಂತಹ ವಿಷಯಗಳಿಗೆ ಹೋರಾಡಿದ್ದಾರೆಯೇ ಹೊರತು ಸಂಘಟನೆಯೊಳಗಡೆಯೇ ಮಹಿಳಾ ಪ್ರಶ್ನೆಯನ್ನು ಆದ್ಯತೆಯನ್ನಾಗಿಸಲು ಹೋರಾಡಲಿಲ್ಲ. ಇಲ್ಲಿ ಚಿಂತಿಸಬೇಕಾದ ಮತ್ತೊಂದು ನಿರ್ಣಾಯಕ ಎಳೆ ಏನೆಂದರೆ ಕಾರ್ಮಿಕ

ಸಂಘಟನೆಯೊಳಗೆಯೇ ಮಹಿಳಾ ಪ್ರಶ್ನೆಯ ಗ್ರಹಿಕೆ - ಅಂದರೆ ವರ್ಗ ಪ್ರಶ್ನೆಯೊಳಗೆಯೇ ಪಿತೃಪ್ರಧಾನತೆಯ ಅಂಶವನ್ನು ಒಳಗೊಳ್ಳಬೇಕೆ ? ಈ ಪ್ರಶ್ನೆಗೆ ಸಂಬಂಧಿಸಿದಂತೆ ಇರುವ ಬೇರೆ ಸೈದ್ಧಾಂತಿಕ ದಾರಿಗಳೇನು ? ಕಾರ್ಮಿಕರಾಗಿ ಮಹಿಳೆಯರು ಎದುರಿಸುವ ಸಮಸ್ಯೆಗಳಲ್ಲದೆಯೇ ಮಹಿಳೆ ಎಂಬ ಕಾರಣಕ್ಕೆ ಅವರು, ಜಾತಿ, ಪುರುಷ ಪ್ರಧಾನತೆಯ ಹೆಸರಿನಲ್ಲಿ ತಾರತಮ್ಯ ಅನುಭವಿಸುತ್ತಾರೆ. ಹೊಡೆತ, ವರದಕ್ಷಿಣೆ ಹಿಂಸೆ, ಶಿಕ್ಷಣಾವಕಾಶದಿಂದ, ಅಸ್ತಿ ಹಕ್ಕಿನಿಂದ ವಂಚಿತರಾಗಿರುವುದು, ತೊರೆಯಲ್ಪಡುವುದು.ಇವು ಮಹಿಳೆಯರ ಬದುಕಿನ ನಿತ್ಯಸತ್ಯವಾಗಿದೆ. ಕಾರ್ಮಿಕಳಾಗಿ, ಮಹಿಳೆಯಾಗಿ ಪ್ರತಿಯೊಬ್ಬ ಮಹಿಳೆಯ ಅನುಭವವನ್ನು ಐತಿಹಾಸಿಕವಾಗಿ ಹಾಗು ಇಂದಿನ ದೃಷ್ಠಿಕೋನದಿಂದ ಗುರುತಿಸುವುದು ಅತ್ಯವಶ್ಯಕ. ಆ ಮೂಲಕ ಪರಿಣಾಮಕಾರಿ ಕಾರ್ಯತಾಂತ್ರಿಕ ಪ್ರತಿಕ್ರಿಯೆಗಳನ್ನು ಕಟ್ಟಲು ಸಾಧ್ಯವಾಗುತ್ತದೆ. 'ಮಹಿಳೆ' ಎಂಬ ಐಡೆಂಟಿಟಿಯು 'ಕಾರ್ಮಿಕ'ಳೆಂಬ ಐಡೆಂಟಿಟಿಯೊಂದಿಗೆ ಢಿಕ್ಕಿ ಹೊಡೆಯುತ್ತದೆ. ಪುರುಷ ಪ್ರಧಾನತೆಯ ಕಾರಣಕ್ಕೊ ಅಥವಾ ಸಾಮ್ರಾಜ್ಯಶಾಹಿ ಕಾರಣಕ್ಕೊ ಮಹಿಳೆಯರು ಅಂಚಿಗೆ ನೂಕಲ್ಪಟ್ಟಿರುವುದನ್ನು ಏಕಕಾಲಿಕವಾಗಿ ಗಮನಿಸುವ ಅಗತ್ಯವಿದೆ. ಎಲ್ಲಾ ರೀತಿಯ ತಾರತಮ್ಯಕ್ಕಿಂತ ವರ್ಗ ಹೋರಾಟವೇ ಆದ್ಯತೆ ಪಡೆದುಕೊಳ್ಳಬೇಕೆನ್ನುವ ಸವಕಲು ದೃಷ್ಠಿಕೋನವನ್ನು ಮರು ವಿಮರ್ಶಿಸುವ ಅಗತ್ಯವಿದೆ.

ಕಾರ್ಮಿಕ ಸಂಘಟನೆಗಳು ಸಾಂಪ್ರದಾಯಿಕವಾಗಿ ಆಚರಿಸಿಕೊಂಡು ಬಂದಿರುವುದು ಕೇಂದ್ರೀಕೃತ ಪ್ರಜಾ ಪ್ರಭುತ್ವವನ್ನು. ಅಲ್ಲಿ ನಾಯಕತ್ವವು ಎಲ್ಲಾ ಮಾಹಿತಿಯ ಗುಡಾಣವಾದರೆ ಇನ್ನುಳಿದ ಹಂತದ ಸದಸ್ಯರುಗಳಿಗೆ ಅವರ ಆಸಕ್ತಿ ಹಾಗು ಪಾಲ್ಗೊಳ್ಳುವಿಕೆಗನುಗುಣವಾಗಿ ಸಂಘಟನೆಯ ವಿಷಯಗಳ ಅರಿವಿರುತ್ತದೆ. ಇದರಿಂದಾಗಿಯೇ, ಸಂಘಟನೆಯೊಳಗೆ ಕೈಗೆತ್ತಿಕೊಳ್ಳುವ ವಿಷಯಗಳನ್ನು ನಿರ್ಣಯಿಸುವವರು ಪ್ರಬಲವಾಗಿರುವವರು ಮಾತ್ರ. ಹಾಗಾಗಿ ಮಹಿಳಾ ವಿಷಯಗಳು ಆದ್ಯತೆಯನ್ನು ಕಳೆದುಕೊಳ್ಳುತ್ತವೆ. ಸಂಘಟಿತ ಕಾರ್ಮಿಕ ಸಂಘಗಳು ಆರ್ಥಿಕತೆಗೆ ಹೆಚ್ಚಿನ ಒತ್ತು ನೀಡುವುದಕ್ಕೂ ಅವು ಕಾರ್ಯನಿರ್ವಹಿಸುವ ಶೈಲಿಗೂ ಸಂಬಂಧವಿರುವುದು ಹಲವು ರೀತಿಯಲ್ಲಿ ವ್ಯಕ್ತವಾಗಿದೆ. ಈ ಅಂಶವನ್ನು ಕುರಿತು ಮಹಿಳಾ ಚಳುವಳಿಯು ಪ್ರಬಲವಾಗಿ ಟೀಕಿಸಿದೆ. ಮಹಿಳಾ ಚಳುವಳಿ ಹೆಚ್ಚಿನ ಒತ್ತು ನೀಡುವುದು ಒಮ್ಮತಕ್ಕೆ (Consensus). ನಿರ್ಣಯವನ್ನು ಕೂಡಲೇ ತೆಗೆದುಕೊಳ್ಳಬೇಕಾದಂತಹ ಸಂದರ್ಭದಲ್ಲಿ ಈ ಒಮ್ಮತವೇ ತೊಡಕಾಗಬಹುದು. ಇಂತಹ ಪರಿಸ್ಥಿತಿಗಳು, ನಿರ್ದಿಷ್ಟವಾಗಿ ಸಂಘಟಿತ ಕ್ಷೇತ್ರದಲ್ಲಿ ಸಹಜ. ಅಲ್ಲಿ ಕಾರ್ಮಿಕ ಸಂಘ ಹಾಗೂ ಮ್ಯಾನೇಜ್‌ಮೇಂಟಿನವರ ದಾರಿಗಳು ಸುಸ್ಪಷ್ಟ. ತಂತ್ರಜ್ಞಾನ, ಮಾಹಿತಿ, ಸುವ್ಯವಸ್ಥೆಯನ್ನೆಲ್ಲಾ ಹೊಂದಿರುವ ಮ್ಯಾನೇಜ್‌ಮೆಂಟಿನವರನ್ನು ಕಾರ್ಮಿಕ ಸಂಘಗಳು ಎದುರಿಸ ಬೇಕಾಗುತ್ತದೆ. ಆದರೆ ಹೋರಾಟವು ದೀರ್ಘಕಾಲಿಕವಾಗಿರುವ ಅಸಂಘಟಿತ ಕ್ಷೇತ್ರದಲ್ಲಿ ಒಮ್ಮತದ ಅಗತ್ಯವಿದೆ. ಇಲ್ಲಿ ಹೋರಾಟದ ನಿರಂತರತೆಯ ದೃಷ್ಟಿಯಿಂದ ವೈಯಕ್ತಿಕ ಹಾಗು ರಾಜಕೀಯ ಇವೆರೆಡರ ನಡುವೆ ಸಂಪರ್ಕ ಬೆಸೆಯುವಂತಹ ಕಾರ್ಯತಂತ್ರವನ್ನು ರೂಪಿಸುವುದು ಅತ್ಯವಶ್ಯಕವಾಗುತ್ತದೆ.

ಕಾರ್ಮಿಕ ಸಂಘಟನೆಯ ಸಾಂಪ್ರದಾಯಿಕ ಕಾರ್ಯತಂತ್ರಗಳ ಮೇಲಿನ ಟೀಕೆಯು ಹಲವು ರೀತಿಯ ಪ್ರಯೋಗಗಳಿಗೆ ದಾರಿಯಾಗಿದೆ. ಈ ಪ್ರಯೋಗಗಳು, ಕೇಂದ್ರಿಕರಿಸಬೇಕಾದ ವಿಷಯದಲ್ಲಿ ಬದಲಾವಣೆಯನ್ನು ಬಯಸುತ್ತವೆ. ಫಲಿತಾಂಶಕ್ಕಿಂತ ಪ್ರಕ್ರಿಯೆಯತ್ತ, ಕಾರ್ಖಾನೆಯ ಗೋಡೆಗಳಿಂದ ಸಮುದಾಯದತ್ತ, ವೇತನದಿಂದ ಇತರ ವಿಷಯಗಳತ್ತ ಲಿಂಗ ಸಂಬಂಧಿ ನೆಲೆಯಿಂದ ನೋಡುವ ಅಗತ್ಯಕ್ಕೆ ಒತ್ತು ನೀಡುತ್ತವೆ.

ಮಹಿಳೆಯರನ್ನು ಕಾರ್ಮಿಕರಾಗಿ, ಮಹಿಳೆಯರಾಗಿ, ನಾಗರೀಕರಾಗಿ ನೋಡುವ ಸ್ಪಷ್ಟ ದೃಷ್ಠಿಕೋನವನ್ನುಳ್ಳ, ಹಕ್ಕುಗಳನ್ನಾಧರಿಸಿದ ವಿಧಾನವನ್ನು ಅಳವಡಿಸಿಕೊಳ್ಳಲು ಪ್ರಯತ್ನ ನಡೆಸಿವೆ. ಮಹಿಳಾ ಸಶಕ್ತತೆಗೆ (ಸಾಮಾಜಿಕ, ರಾಜಕೀಯ) ಪ್ರಯತ್ನಿಸದ ಆರ್ಥಿಕ ಸಶಕ್ತತೆಯೂ ಯಾವ ಫಲವನ್ನು ನೀಡದ ಭ್ರಮೆ ಎಂಬುದನ್ನು ಹೊಸ ರೀತಿಯ ಸಂಘಟನಾ ವಿಧಾನಗಳು ಸೂಚಿಸುತ್ತವೆ.

ಈ ಹಿನ್ನೆಲೆಯಲ್ಲಿ ಕಾರ್ಮಿಕ ಸಂಘಟನೆಗಳು ಮತ್ತು ಮಹಿಳಾ ಪ್ರಶ್ನೆಯನ್ನು ನಾವು ಹೇಗೆ ನೋಡಬೇಕು.

(ಅ) ಸಂಪೂರ್ಣ ಸಶಕ್ತತೆ ಆದರ್ಶವಪ್ಪೇ ಆದರೆ ಅದನ್ನು ಮಹಿಳಾ ಗುಂಪುಗಳೊಂದಿಗೆ ಸಂಬಂಧ ಕಲ್ಪಿಸುವ ಮೂಲಕ ಸಾಧಿಸಬಹುದೆನ್ನುವುದನ್ನೂ ಒಪ್ಪಿಕೊಳ್ಳುತ್ತೇವೆಯೆ? ಅಥವಾ

(ಆ) ಮಹಿಳೆ ಎಂಬ ಐಡೆಂಟಿಟಿಯೇ ಮಹಿಳಾ ಕಾರ್ಮಿಕ ಐಡೆಂಟಿಟಿಯನ್ನೊಳಗೊಂಡಿದೆ ಮತ್ತು ವರ್ಗ ಹೋರಾಟವು ತನ್ನ ವ್ಯಾಪ್ತಿಯನ್ನು ವಿಸ್ತರಿಸಿ ಪಿತೃಪ್ರಧಾನತೆಯ ವಿರುದ್ಧದ ಹೋರಾಟವನ್ನೂ ಒಳಗೊಳ್ಳ ಬೇಕೆಂದನ್ನು ನಾವು ನಂಬುತ್ತೇವೆಯೆ?

- ರೂಪಾ

# ವರ್ಗ ಸಂಘರ್ಷದಿಂದ ವಿಮುಖರಾಗಬಾರದು



ರೂಪಾರವರ ಲೇಖನದಲ್ಲಿ ಕಾರ್ಮಿಕ ಸಂಘಟನೆಗಳು ಮಹಿಳಾ ಪ್ರಶ್ನೆಗಳನ್ನು ಹೇಗೆ ನೋಡಬೇಕು ಅದರಲ್ಲು ಸಂಪೂರ್ಣ ಸಶಕ್ತತೆ ಆದರ್ಶದಿಂದ ಮಾತ್ರವೇ ಎಂಬುದು, ಪಿತೃಪ್ರಧಾನ ವ್ಯವಸ್ಥೆಯ ವಿರುದ್ಧದ ಹೋರಾಟವೇ ಎಂಬ ಪ್ರಶ್ನೆಗಳನ್ನು ಎತ್ತಿದ್ದಾರೆ.

ಮೂಲಭೂತವಾಗಿ ಕಾರ್ಮಿಕ ಸಂಘಟನೆಗಳಲ್ಲಿ ಮಹಿಳೆಯರ ಪಾತ್ರದ ಮತ್ತು ಪ್ರಶ್ನೆಗಳ ಬಗ್ಗೆ ಇಂತಹ ಲೇಖನ ಬರೆದಿರುವುದು ಸ್ವಾಗತಾರ್ಹ (ಲೇಖನವನ್ನು ಕನ್ನಡಕ್ಕೆ ಅನುವಾದಿಸಿ ಪ್ರತಿಕ್ರಿಯೆಗಳನ್ನು ಕೇಳುವಂತಹ ಪ್ರಯತ್ನವೂ ಒಳ್ಳೆಯದು) ಆದರೆ ಈ ಪ್ರಯತ್ನಗಳು ದಾರಿ ತಪ್ಪದೇ ಯಶಸ್ವಿಆಗಲೆಂದು ಹಾಗೂ ಚರ್ಚೆಗಳು ಹೆಚ್ಚಾಗಲೇ ಬೇಕೆಂಬುದನ್ನು ಬಯಸುತ್ತೇನೆ.

ರೂಪಾರವರು ತಮ್ಮ ಲೇಖನದಲ್ಲಿ ದುಡಿಯುವ ಮಹಿಳೆಯರ ಸಾಮಾಜಿಕ ಸಮಸ್ಯೆಗಳ ಪ್ರಸ್ತಾಪ ಮಾಡಿರುವುದನ್ನು ಒಪ್ಪುತ್ತೇನೆ.

ಸಮಾಜದ ಅರ್ಧದಷ್ಟಿರುವ ಮಹಿಳೆಯರು ವರ್ಗ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಬಲ್ಲರು ಹಾಗೂ ಬಲವನ್ನು ಕೊಡ ಬಲ್ಲರು. ಅದರಲ್ಲೂ ದುಡಿಯುವ ಮಹಿಳೆಯರು ಕಾರ್ಮಿಕ ಸಂಘಟನೆಗಳಲ್ಲಿ ಪ್ರಮುಖ ಪಾತ್ರ ವಹಿಸುವಂತೆ ಆಯೋಜಿಸುವುದರಲ್ಲಿ ಭಾರತೀಯ ಕಾರ್ಮಿಕ ಸಂಘಟನೆಗಳ ಚಳುವಳಿ ವಿಫಲವಾಗಿದೆ. ಈ ಒಂದು ದೌರ್ಬಲ್ಯವನ್ನು ಪ್ರಜ್ಞೆ ಹಾಗು ಯೋಜಿತ ಕಾರ್ಯಕ್ರಮಗಳಿಂದ ವಿಶಾಲವಾಗಿ ಹಾಗು ಶಕ್ತಿಯನ್ನು ಹೆಚ್ಚಿಸುವುದರ ಮೂಲಕ ಭಾರತೀಯ ಕಾರ್ಮಿಕ ಸಂಘಟನಾ ಚಳುವಳಿಯನ್ನು ಬೆಳೆಸಬೇಕಾಗಿದೆ. ಮಹಿಳೆಯರಲ್ಲಿರುವ ಕೀಳರಿಮೆ ಹಾಗೂ ಹಿಂದುಳಿದಿರುವ ದುರ್ಬಲತೆಯನ್ನು ಹೋಗಲಾಡಿಸಲು ಕಾರ್ಮಿಕ ಸಂಘಟನೆಗಳ ನೇರ ಹಾಗೂ ಹೆಚ್ಚಿನ ಪಾತ್ರವಹಿಸುವಿಕೆಯಿಂದ ತಿಳುವಳಿಕೆಯನ್ನು ಒದಗಿಸುವುದರ ಮೂಲಕ, ಅವರಲ್ಲಿ ಧೈರ್ಯವನ್ನು ಮೂಡಿಸುವುದರ ಮೂಲಕ ಅವರು ಸಂಘಟನೆಗೊಂಡು ಚಳುವಳಿಯಲ್ಲಿ ಇಳಿಯುವಂತೆ ಮಾಡ ಬೇಕಾಗಿದೆ. ಮಹಿಳೆಯರು ತಮ್ಮಲ್ಲಿ ಒಳಗೊಂಡಿರುವ ಆಂತರಿಕ ವಿರೋಧ ಭಾವನೆಯನ್ನು ಮೆಟ್ಟಿ ಕಾರ್ಮಿಕ ಸಂಘಟನೆಗಳಲ್ಲಿ ಪ್ರಮುಖ ಪಾತ್ರ ವಹಿಸಿ ಜವಬ್ದಾರಿ ಸ್ಥಾನಗಳಲ್ಲಿ ನಿಂತು ಕಾರ್ಮಿಕ ಹೋರಾಟಚಳುವಳಿಯಲ್ಲಿ ಗಟ್ಟಿಯಾಗಿ ನಿಲ್ಲಬೇಕಾಗಿದೆ ಮತ್ತು ನಡೆಸಿಕೊಂಡು ಹೋಗಬೇಕಾಗಿದೆ.

### ವರ್ಗ ಹೋರಾಟದ ಕೆಲಸ :

ದುಡಿಯುವ ಮಹಿಳೆಯೇ ವರ್ಗ ಹೋರಾಟದ ಪ್ರಾಥಮಿಕ ಆದ್ಯತೆ ಸಮಾಜದ ಒಂದು ಭಾಗವಾದ ಹೆಣ್ಣುಮಕ್ಕಳು ದುರ್ಬಲವರ್ಗದವರು ಎನ್ನುವಂತಹ ಸಂತಾಪವನ್ನು ತೋರಿಸುವ ಮಾರ್ಗದಿಂದಲ್ಲ, ಒಟ್ಟಾರೆ ಮಹಿಳಾ ವರ್ಗವನ್ನು ಸಾಮಾನ್ಯ ಸ್ತರಗಳಲ್ಲಿ ದುರ್ಬಲ ಲಿಂಗವಾಗಿ ಪರಿಗಣಿಸಿರುವುದಾಗಿದೆ. ಅವರ ನೋವುಗಳಿಗೆ ಕೃಪೆ ತೋರಿಸುವಂತಹ ಪೋಷಕರ ರೀತಿಯ ಪಾತ್ರವಾಗಲ್ಲದೆ ವರ್ಗದ ಕನಿಷ್ಠ ಆದ್ಯತೆಯುಳ್ಳ ಮತ್ತು ಹೆಚ್ಚಿನ ತುಳಿತಕ್ಕೆ ಒಳಗಾಗಿರುವವರೆಂದೂ ನೋಡ ಬೇಕು, ಅಭಯ ಹಸ್ತವನ್ನು ನೀಡುವ ರೀತಿಯಲ್ಲಿ ನೋಡಬಾರದು. ಮಹಿಳೆಯರನ್ನು ಕಾರ್ಮಿಕ ವರ್ಗದ ಭಾಗವಾಗಿ ತಿಳಿಯ ಬೇಕಿದೆ. ಎಲ್ಲ ರೀತಿಯ ಉತ್ಪಾದನೆ, ವಿತರಣೆ ಮತ್ತು ವಿನಿಮಯವನ್ನು ಸಾಮೂಹಿಕ ಸಮಾಜವಾದಿ ಸಮಾಜದ ತಳಹದಿಯ ಮೇಲೆ ಮಾತ್ರವೇ ದುಡಿಯುವ ವರ್ಗದ ಶೋಷಣೆ ಕೊನೆಗಾಣಲು ಸಾಧ್ಯ ಎಂಬ ಧ್ಯೇಯವನ್ನು CITU ನಂಬುತ್ತದೆ. ಸಮಾಜವಾದದ ಧ್ಯೇಯವನ್ನು ಪ್ರತಿಪಾದಿಸುವ ಹಾದಿಯಲ್ಲಿ CITU ಸಮಾಜದಲ್ಲಿ ಎಲ್ಲಾ ರೀತಿಯ ಶೋಷಣೆಯನ್ನು ಹೋಗಲಾಡಿಸಲು ದುಡಿಯುತ್ತದೆ. ಅಂತೆಯೇ ಸಮಾಜದಲ್ಲಿನ ಅರ್ಧ ಭಾಗದಷ್ಟಿರುವ ಹೆಣ್ಣು ಮಕ್ಕಳ ಮೇಲಿನ ಶೋಷಣೆಯ ವಿರುದ್ಧವೂ ಹೋರಾಡುತ್ತದೆ.

ರೂಪಾರವರು ಸಮಾಜವಾದವನ್ನು ಸವಕಲು ಸಿದ್ಧಾಂತ ಎಂಬುದು ಸರಿಯಲ್ಲ. ಆ ಧ್ಯೇಯವನ್ನು ಮುಟ್ಟಲಿಕ್ಕೆ ಬೇಕಾದಂತಹ ತ್ಯಾಗ, ಹೋರಾಟಗಳು ಆ ನಿಟ್ಟಿನಲ್ಲಿ ನಡೆಯುತ್ತಿವೆಯೇ ಎಂಬುದನ್ನು ವಿಮರ್ಶಿಸ ಬೇಕೇ ಹೊರತು ಸಿದ್ಧಾಂತವನ್ನಲ್ಲ.

ಯಾವ ಕೇಂದ್ರ ಕಾರ್ಮಿಕ ಸಂಘಟನೆಗಳೂ ಮಹಿಳೆಯರ ಪ್ರಶ್ನೆಗಳನ್ನು

ಎತ್ತುತ್ತಿಲ್ಲ ಹಾಗು ಪ್ರತ್ಯೇಕ ಮಹಿಳಾ ವಿಭಾಗಗಳನ್ನು ಮಾಡಿಲ್ಲ ಎಂಬ ಟೀಕೆಗೆ CITU ಹೊರತಾಗಿದೆ. CITU ಸಂವಿಧಾನ "ಜಾತಿ, ಮತ, ಜನಾಂಗ, ಲಿಂಗ ಬೇಧದಿಂದ ಬೇರಿಡುವ ಉದ್ಯೋಗ ಬಡ್ತಿ, ವೇತನಗಳಲ್ಲಿನ ತಾರತಮ್ಯಗಳನ್ನು ನಿರ್ಮೂಲ ಮಾಡಲು ಹೋರಾಟ ಮಾಡುತ್ತದೆ". ದುಡಿಯುವ ಮಹಿಳೆಯ ಶೋಷಣೆ ದುಡಿಯುವ ವರ್ಗದ ಶೋಷಣೆಯ ಒಂದು ಭಾಗ. ಇದು ಬಂಡವಾಳ ಶಾಹಿ ವ್ಯವಸ್ಥೆ ಇರುವವರೆಗೆ ಇರುತ್ತದೆ, ಮಹಿಳೆಯರ ಶೋಷಣೆಯನ್ನು ಸಮಾಜವಾದಿ ಮಾದರಿ ಸಮಾಜ ವ್ಯವಸ್ಥೆ ಸ್ಥಾಪಿಸುವ ಮುಖಾಂತರ ಕೊನೆಗಾಣಿಸ ಬಹುದು, ಎಂಬುದನ್ನು CITU ಬಲವಾಗಿ ಪ್ರತಿಪಾದಿಸುತ್ತದೆ. ಸಮಾಜವಾದ ಬರುವವರೆಗೆ ನಾವು ಮಹಿಳೆಯ



ಪ್ರಶ್ನೆಗಳ ಬಗ್ಗೆ ಹೋರಾಟ ಮಾಡುವುದಿಲ್ಲ ಎಂಬ ಅನೇಕರ ಟೀಕೆಯಲ್ಲಿ ಯಾವುದೇ ಹುರುಳಿಲ್ಲ.

CITU ಹುಟ್ಟಿದ್ದು 1970 ರಲ್ಲಿ. ವರ್ಗ ಹೋರಾಟದ ಭಾಗವಾಗಿರುವ ಮಹಿಳೆಯರನ್ನು ಕೂಡಿಸುವ ಮತ್ತು ಜವಾಬ್ದಾರಿಯುತ ಸ್ಥಾನಗಳಲ್ಲಿ ಮಹಿಳೆಯರನ್ನು ಪಾಲ್ಗೊಳ್ಳಿಸುವ, ಮಹಿಳೆಯರ ಸಮಸ್ಯೆಗಳನ್ನು ವಿಶೇಷವಾಗಿ ಚರ್ಚಿಸುವ, ಅಗತ್ಯತೆ ಯನ್ನು ಅರಿತು 1979ರಲ್ಲಿ ಮದ್ರಾಸ್‌ನಲ್ಲಿ ಅಖಿಲ ಭಾರತ ದುಡಿಯುವ ಮಹಿಳೆಯರ ಸಮಾವೇಶ ನಡೆಸಿ "ದುಡಿಯುವ ಮಹಿಳೆಯರ ಸಮನ್ವಯ ಸಮಿತಿ" ಯನ್ನು ರಚಿಸಿದೆ. ಪ್ರತಿ 3 ವರ್ಷಕ್ಕೊಮ್ಮೆ ಅಖಿಲ ಭಾರತ ಮಟ್ಟದಿಂದ ಸ್ಥಳೀಯ ಮಟ್ಟದವರೆಗೂ ಸಮಾವೇಶಗಳನ್ನು ನಡೆಸಿ ಸಮಿತಿಗಳನ್ನು ಆಯ್ಕೆ ಮಾಡಿ ಅದರ ಮುಖಾಂತರ ಮಹಿಳೆಯರ ಸಮಸ್ಯೆಗಳನ್ನು ತೆಗೆದುಕೊಳ್ಳುವುದು, ತರಬೇತಿ ಶಿಬಿರಗಳನ್ನು, ಸಂಘಟನಾ ಕಾರ್ಯಾಗಾರಗಳನ್ನು ಮಾಡಲಾಗುತ್ತಿದೆ. CITU ವಿನ ಎಲ್ಲ ರೀತಿಯ ಸಮಿತಿಗಳಲ್ಲಿಯೂ ಈ ಸಮಿತಿಯ ಬಗ್ಗೆ ಅಜೆಂಡಾವಿಟ್ಟು ಚರ್ಚಿಸಲಾಗುತ್ತದೆ, ಇದರ ಫಲವಾಗಿ CITU ವಿನ ಅಖಿಲ ಭಾರತ ಮಟ್ಟದಿಂದ ಸ್ಥಳೀಯ ಸಮಿತಿಗಳಲ್ಲಿ, ಕಾರ್ಯಕಾರಿ ಸಮಿತಿಗಳಲ್ಲಿ ಮಹಿಳೆಯರು ಸದಸ್ಯರಾಗಿದ್ದಾರೆ. CITU ಗೆ ಸಂಯೋಜನೆ-ಯಾಗಿರುವ ಎಲ್ಲಾ ಯೂನಿಯನ್‌ಗಳಲ್ಲಿ ಮಹಿಳೆಯರು ಪದಾಧಿಕಾರಿಗಳಾಗಿದ್ದಾರೆ. ಹಾಗೂ ಸರ್ಕಾರ ಅಥವಾ ಮಾಲೀಕರ ಬಳಿಯ ಚರ್ಚೆಗೂ ಹೋಗುತ್ತಿದ್ದಾರೆ.

CITU ಈ ರೀತಿಯ ಪ್ರಾತಿನಿಧ್ಯತೆ ನೀಡಿದ ಕೂಡಲೇ ನಾವು ಸಂಪೂರ್ಣ ಯಶಸ್ಸು ಆಗಿದೆ ಎಂದೂ ಹೇಳಲು ಸಾಧ್ಯವಿಲ್ಲ ಏಕೆಂದರೆ ಈ ರೀತಿಯ ಕೆಲಸ ಹಾಗೂ ಇದಕ್ಕೆ ಬೇಕಾದ ಶ್ರಮವನ್ನು ಹೆಚ್ಚಿಸ ಬೇಕಾಗಿದೆ. ಇದೇ ರೀತಿ ಎಲ್ಲಾ ಕೇಂದ್ರ ಕಾರ್ಮಿಕ ಸಂಘಟನೆಗಳು ಮಾಡಬೇಕಾಗಿದೆ. ಅಂತರ ರಾಷ್ಟ್ರೀಯ ಕಾರ್ಮಿಕ ಸಂಘಟನೆ (ILO) ಗಳು ದುಡಿಯುವ ಮಹಿಳೆಯರು ಸಂಘಟನೆಯ ಜವಬ್ದಾರಿ ತೆಗೆದುಕೊಳ್ಳುವ ನಿಟ್ಟಿನಲ್ಲಿ ನಿರಂತರ ಪ್ರಯತ್ನವನ್ನು ಮಾಡಬೇಕಾಗಿದೆ.

ದೀರ್ಘ ಕಾಲಿಕವಾಗಿರುವ ಅಸಂಘಟಿತ ಕ್ಷೇತ್ರದಲ್ಲಿ ಒಮ್ಮತದ ಅಗತ್ಯವಿದೆಯೆಂಬ ಪ್ರಶ್ನೆಗೆ ಸಂಬಂಧಿಸಿದಂತೆ ಶ್ರೀಮತಿ ರೂಪಾರವರ ಅಭಿಪ್ರಾಯ ಸರಿಯಿದೆ. ಅಸಂಘಟಿತ ಕ್ಷೇತ್ರದಲ್ಲಿ ಮುಖ್ಯವಾಗಿ ಕಾರ್ಮಿಕರನ್ನು ಕಾರ್ಮಿಕರು ಎಂದು ಗುರ್ತಿಸುವ ಪ್ರಾಥಮಿಕ ಕೆಲಸಕ್ಕೆ ಬೇಕಾದ ಕಾರ್ಮಿಕ ಕಾನೂನುಗಳು ಬೇಕಾಗಿವೆ. ಜಾಗತೀಕರಣದ ನೀತಿಗಳಿಂದಾಗಿ ಸಂಘಟಿತ ಕ್ಷೇತ್ರದ ಹಲವಾರು ವಲಯಗಳು ಅಸಂಘಟಿತ ಕ್ಷೇತ್ರವಾಗಿ ಪರಿವರ್ತನೆಯಾಗುತ್ತಿದೆ. ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಕಾರ್ಮಿಕರಿಗೆ ಯಾವುದೇ ರೀತಿಯೂ ಸಹಾಯವಾಗದ "ಅಸಂಘಟಿತ ಕ್ಷೇತ್ರದ ಕಲ್ಯಾಣ ಮಸೂದೆ" ಯನ್ನು ಜಾರಿಗೆ ತರುತ್ತಿದೆ. ಮಸೂದೆ ಬದಲಾವಣೆಗೆ ನಾವು

ಆಗ್ರಹಿಸಿದರೆ ಮತ್ತೇ ಕೆಲವರು ಹೇಗಾದರೂ ಇರಲಿ ಮೊದಲು ಮಸೂದೆಯಾಗಲಿ ಎಂಬ ವಾದಗಳು ಬರುತ್ತಿವೆ. ಇದು ಸರಿಯಲ್ಲ, ಇತ್ತೀಚೆಗೆ ಕೆಲವು ಸ್ವಯಂ ಸೇವಾ ಸಂಘಟನೆಗಳು ಕೂಡಾ ಅಸಂಘಟಿತರ ಹೆಸರಲ್ಲಿ ಹೋರಾಟಗಳನ್ನು ನಡೆಸಿದ್ದಾರೆ. ಹೋರಾಟ ಮಾಡುವಾಗ ಬೇಡಿಕೆಯಿಡುವಾಗ ಅದರ ಬಗ್ಗೆ ಪರಿಪೂರ್ಣ ವೈಜ್ಞಾನಿಕ ಸಮಾನ ತಿಳುವಳಿಕೆಯಿದ್ದಾಗ, ಮಾತ್ರ ಅಸಂಘಟಿತ ಕ್ಷೇತ್ರದ ಸಮಸ್ಯೆಗಳ ಬಗ್ಗೆ ಒಮ್ಮತ ಮೂಡಲು ಸಾಧ್ಯ.

ಹಾಗೆಯೇ ಕಾರ್ಮಿಕ ಚಳುವಳಿಗಳು ಕೇವಲ ಆರ್ಥಿಕ ಬೇಡಿಕೆಗಳಲ್ಲದೇ ಸಾಮಾಜಿಕ ಪ್ರಶ್ನೆಗಳನ್ನು ತೀವ್ರವಾಗಿ ತೆಗೆದುಕೊಳ್ಳುವುದರ ಅಗತ್ಯತೆಯೂ ಇದೆ.

ಈ ಲೇಖನದಲ್ಲಿ ಬಂಡವಾಳ ಶಾಹಿ ಜಗತ್ತಿನಲ್ಲಿ ಕಾರ್ಮಿಕ ವರ್ಗವನ್ನು ವರ್ಗ ಸಂಘರ್ಷದ ಹಾದಿಯಿಂದ ವಿಮುಖರನ್ನಾಗಿಸಲು ಸೃಷ್ಟಿ ಮಾಡಿರುವ ವಿಚಾರ ಹಾಗೂ ಪರಿಕಲ್ಪನೆಗಳನ್ನು ಹಸಿ ಹಸಿಯಾಗಿಯೇ ತೆಗೆದುಕೊಂಡು ಭಾರತದ ಮಹಿಳಾ ಕಾರ್ಮಿಕ ವರ್ಗಕ್ಕೆ ಉಣಿಸ ಲಾಗಿದೆ.

ವರ್ಗ ಸಂಘರ್ಷದ ಹಾದಿಯಲ್ಲಿ ನಡೆದಿರುವ ಕಾರ್ಮಿಕ ಚಳುವಳಿಯಲ್ಲಿ ಅನೇಕ ಕೊರತೆಗಳಿವೆ. ಆ ಕೊರತೆಗಳನ್ನು ತುಂಬಿ ಕಾರ್ಮಿಕ ಚಳುವಳಿಯನ್ನು ಬಲಗೊಳಿಸುವುದರ ಬದಲಾಗಿ ಆ ಕೊರತೆಗಳನ್ನು ಬಳಸಿಕೊಂಡು ಕಾರ್ಮಿಕ ಚಳುವಳಿಯನ್ನು ದಾರಿ ತಪ್ಪಿಸುವ ಸಾಮ್ರಾಜ್ಯ ಶಾಹಿ ದೇಶಗಳ ಹುನ್ನಾರವನ್ನು ಈ ಲೇಖನದ ಲೇಖಕಿಯ ಗಮನಕ್ಕೆ ಬಂದಿಲ್ಲವೇನೋ ಎಂಬ ಸಂಶಯ ಮಾಡುತ್ತದೆ.

ಈ ಲೇಖನದಲ್ಲಿ

1. ಮಹಿಳಾ ಐಡೆಂಟಿಟಿ v/s ಕಾರ್ಮಿಕ ಐಡೆಂಟಿಟಿ
2. ಸಾಂಪ್ರಾದಾಯಿಕ ಕಾರ್ಯ ತಂತ್ರಗಳು v/s ಹೊಸ ಕಾರ್ಯ ತಂತ್ರಗಳು
3. ಕೇಂದ್ರಿಕೃತ ಪ್ರಜಾಪ್ರಭುತ್ವ ಸಂಘಟನೆಯ ತತ್ವ V/S ಒಮ್ಮತ (ಕನ್‌ಸೆನ್ಸ್‌ಸ್)ದ ವಿಧಾನ
4. ಕಾರ್ಮಿಕ ಚಳುವಳಿಯ ಇತಿಹಾಸದಲ್ಲಿ ಸಮಾಜವಾದಿ ಸ್ತ್ರೀವಾದಿ, ದುಡಿಯುವ ವರ್ಗದ ಇತಿಹಾಸ, ಮುಖ್ಯವಾಹಿನಿಯ ಲಿಂಗ ರಾಜಕೀಯ ಎಂಬ ವಿಭಾಗ ಕ್ರಮಗಳ ಕುರಿತು ಹೇಳಲಾಗಿದೆ.

ಈ ಅರ್ಥವೇ ಸರಿಯಾದರೆ ವರ್ಗ ಚಳುವಳಿಯಿಂದಲೇ ಬಗೆಹರಿಸಬೇಕಾದ ಮಹಿಳೆಯರ ಪ್ರಶ್ನೆಗಳನ್ನು ಮತ್ತು ಮಹಿಳೆಯರನ್ನು ಚಳುವಳಿಯ ಮುಖ್ಯವಾಹಿನಿಯಿಂದ ಬೇರ್ಪಡಿಸಿದಂತಾಗುತ್ತಿದೆ. ಬಂಡವಾಳ ಶಾಹಿಯ ವಿರುದ್ಧದ ಹೋರಾಟದಲ್ಲಿ ಕಾರ್ಮಿಕರು ಎಲ್ಲರೂ ಒಗ್ಗಟ್ಟಾದರೆ ಮಾತ್ರ ಯಶಸ್ಸು ಸಾಧ್ಯವಾಗುತ್ತದೆ. ಉದಾ : ಯಾವುದೇ ಒಂದು ಕಾರ್ಖಾನೆ ತೆಗೆದು ಕೊಂಡರೆ ಒಟ್ಟು 100 ಕಾರ್ಮಿಕರಿದ್ದಾರೆ ಎಂದು ಭಾವಿಸೋಣ ಅವರಲ್ಲಿ 50 ಜನ ಪುರುಷರು, 50 ಜನ ಮಹಿಳೆಯರು ಎಲ್ಲರೂ ಸೇರಿ ಸಂಘ ಕಟ್ಟ ಬೇಡಿಕೆಗಳನ್ನಿಡುತ್ತಾರೆ. ಆ ಬೇಡಿಕೆಗಳಲ್ಲಿ ಮಹಿಳೆಯರ ಬೇಡಿಕೆಯೂ ಇರುತ್ತದೆ. ಬೇಡಿಕೆ ಈಡೇರಿಕೆಗಾಗಿ ಹೋರಾಟ ಅನಿವಾರ್ಯ. ಆ ಹೋರಾಟ ಎಲ್ಲಾ ಕಾರ್ಮಿಕರ ಸಾಮಾನ್ಯ ಮತ್ತು ಅವಶ್ಯಕವಾದ ಬೇಡಿಕೆಗಳೇ. ಅದರಲ್ಲಿ ಮಹಿಳೆಯರು, ಸಂಘದಲ್ಲಿ ಪ್ರಾಧಾನ್ಯತೆ ಸಿಕ್ಕಿಲ್ಲವೆಂದೂ ದೂರ ಸರಿದರೆ ಹೋರಾಟ ಒಡೆಯುತ್ತದೆ. ಒಗ್ಗಟ್ಟು ಛಿದ್ರವಾಗುತ್ತದೆ, ಆಗ ಮಾಲಿಕನೇ ಗೆಲ್ಲುತ್ತಾನೆ.

ನಿಜವಾದ ಪರಿಸ್ಥಿತಿ ಇದೇ ರೀತಿಯಲ್ಲಿರುವುದು. ಇದು ನನ್ನ ಸ್ವಂತ ಅನುಭವ ಕೂಡಾ.

ಇನ್ನೊಂದು ಅಂಶವನ್ನು ಗಮನಿಸಬೇಕು, ಮಹಿಳೆ ಎಂದಾಗ ಬಂಡವಾಳ ಶಾಹಿ ಮತ್ತು ಮೇಲ್ವರ್ಗದ ಮಹಿಳೆಯರು ಬರುತ್ತಾರೆ. ಆದ್ದರಿಂದಲೇ ನಾವು ಕಾರ್ಮಿಕ ಮಹಿಳೆಯೆಂಬ ವರ್ಗ ವಿಭಜನೆಯಿಂದಲೇ ಗುರ್ತಿಸ ಬೇಕಾಗುತ್ತದೆ. ದುಡಿಯುವ ಮಹಿಳೆ ದುಡಿಯುವ ವರ್ಗದ ಭಾಗ. ಪಿತೃ ಪ್ರಧಾನತೆಯ ವಿರುದ್ಧದ ಹೋರಾಟವನ್ನು ಕೈಗೆತ್ತಿಕೊಂಡರೆ ಮಾತೃಪ್ರಧಾನ ವ್ಯವಸ್ಥೆ ಬೇಕೆಂದು ಒತ್ತಾಯಿಸಿದಂತಾಗುತ್ತದೆ. ಯಾವುದೇ ಸಮಾಜ ಎಂದಾಗ ಮಾತೃ ಅಥವಾ ಪಿತೃ ಪ್ರಧಾನ ವ್ಯವಸ್ಥೆ ಬೇಕು ಎನ್ನುವ ಬದಲಿಗೆ ಸಮ ಸಮಾಜ ಬೇಕೆಂಬುದೇ ಹೋರಾಟದ ಗುರಿಯಾಗುಬೇಕು. ಏಕೆಂದರೆ ನಮಗೆ ಬೇಕಿರುವುದು ಮಹಿಳೆ-ಪುರುಷರ, ದುಡಿಯುವ-ದುಡಿಸಿಕೊಳ್ಳುವವರ ಸಮಾನತೆಯನ್ನು ಸಾಧಿಸ ಬೇಕಾಗಿದೆ.

ಈ ಹೋರಾಟದಲ್ಲಿ ಖಂಡಿತವಾಗಿಯೂ ಮಹಿಳೆಯರು ಹೆಚ್ಚು ಪಾಲ್ಗೊಳ್ಳ ಬೇಕಾದರೆ ನಾನೀಗಾಗಲೇ ಪ್ರಸ್ತಾಪಿಸಿರುವ ಹಾಗೆ ಮಹಿಳೆಯರನ್ನು ಸಂಘಟಿಸುವ ಹಾಗೂ ಮಹಿಳೆಯರು ಸಂಘಟಿತರಾಗಿ ಮುಂದೆ ಬರುವ ಪರಸ್ಪರ ಜವಬ್ದಾರಿ-ಅರಿವು ಹೆಚ್ಚಾಗ ಬೇಕಾಗಿದೆ. ಇದಕ್ಕಾಗಿ ದುಡಿಯ ಬೇಕಾಗಿದೆ.

ಎಸ್.ವರಲಕ್ಷ್ಮಿ
ರಾಜ್ಯ.ಪ್ರಧಾನ ಕಾರ್ಯದರ್ಶಿ
ಕರ್ನಾಟಕ ರಾಜ್ಯ ಅಂಗನವಾಡಿ ನೌಕರರ ಸಂಘ
ಸಂಚಾಲಕ : ದುಡಿಯುವ ಮಹಿಳೆಯರ ಸಮನ್ವಯ
ಸಮಿತಿ, ಕರ್ನಾಟಕ, ಕಾರ್ಯದರ್ಶಿ - CITU ರಾಜ್ಯ ಸಮಿತಿ
CITU ನಲ್ಲಿ 10 ವರ್ಷದಿಂದ ಪೂರ್ಣಾವಧಿ ಕಾರ್ಯಕರ್ತೆ

# ಮಹಿಳೆ, ಉದ್ಯೋಗ ಹಾಗೂ ಐಡೆಂಟಿಟಿ

ಮಹಿಳೆ, ಕೆಲಸ ಹಾಗು ಐಡೆಂಟಿಟಿ ಕುರಿತ 'WHEN WORK DOESN'T WORK ANY MORE' ಪುಸ್ತಕದ ಲೇಖಕಿ ಎಲಿಜಬೆತ್ ಪರ್ಲ್ ಮೆಕ್ಕೆನ್ನ ಅಮೆರಿಕಾದ ನ್ಯೂಯಾರ್ಕ್ ನಗರವಾಸಿ. ಸುಮಾರು ಇಪ್ಪತ್ತು ವರ್ಷಗಳ ಕಾಲ ಪ್ರಕಟಣಾ ಸಂಸ್ಥೆಯಲ್ಲಿ ಉನ್ನತ ಹುದ್ದೆಯಲ್ಲಿ ಕೆಲಸ ಮಾಡುತ್ತಿದ್ದರು. ವೃತ್ತಿಯಲ್ಲಿ ಹೆಚ್ಚಿನ ಯಶಸ್ಸು ಪಡೆದಿದ್ದ ಆಕೆ ತನ್ನ ಇಡೀ ಅಸ್ತಿತ್ವವನ್ನು ಕೆಲಸದೊಂದಿಗೆ ಗುರುತಿಸಿಕೊಂಡಿದ್ದರು. ಗಂಡ ಮಗನನ್ನು ಹೊಂದಿದ ಆಕೆಯ ಜೀವನವೂ ಯಶಸ್ವಿಯಾಗೆ ಸಾಗುತ್ತಿತ್ತು. ಆದರೆ ಈ ಯಶಸ್ಸು ನಿಜವಾಗಿಯೂ ತೃಪ್ತಿಯನ್ನು ನೀಡಿದೆಯೇ ಎಂಬ ತಿಕ್ಕಾಟ ಅಂತರಂಗದಲ್ಲಿ ಶುರುವಾದಾಗ ಆಕೆ ಕೆಲಸವನ್ನು ಬಿಟ್ಟು ಕೆಲಸ, ಕೌಟುಂಬಿಕ ಜೀವನ ಹಾಗೂ ತನ್ನ ಐಡೆಂಟಿಟಿಯ ಕುರಿತು ಮರುಚಿಂತಿಸಿದರು. ಆ ಮರುಚಿಂತನೆಯನ್ನು ಹಾಗೂ ಹಲವಾರು ದುಡಿಯುವ ಮಹಿಳೆಯರನ್ನು ಸಂದರ್ಶಿಸಿ ಅವರ ಅನುಭವವನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದ್ದಾರೆ. ಈ ಪುಸ್ತಕದಲ್ಲಿ ಸಂದರ್ಶಿಸಲಾಗಿರುವ ಮಹಿಳೆಯರು ಮಧ್ಯಮ, ಮೇಲ್ವರ್ಗಮಹಿಳೆಯರಾಗಿದ್ದು ಅವರಿಗೆ ಕೆಲಸವೆಂಬುದು ಐಡೆಂಟಿಟಿಯ ಪ್ರಶ್ನೆಯಾಗಿದೆಯೇ ಹೊರತು ಆರ್ಥಿಕ ಅಗತ್ಯವಲ್ಲ. ಇದು ಪುಸ್ತಕದ ಮಿತಿಯೇ ಹೌದು. ಆದರೂ ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳಿಗೆ ತಕ್ಕಂತೆ ಮನೆ ಹಾಗೂ ವೃತ್ತಿಯಲ್ಲಿ ಯಶಸ್ಸು ಸಾಧಿಸಲು ಹೆಣಗಾಡುವ ಮಹಿಳೆಯರ ಅನುಭವವಾಗಿ ಈ ಪುಸ್ತಕ ಮುಖ್ಯವಾಗುತ್ತದೆ. ಮಾನಸದ ಬೆಂಬಲಿಗರಾದ ರಾಧರವರು ಈ ಪುಸ್ತಕವನ್ನು ಓದಿ ತಮ್ಮ ವೃತ್ತಿಯಲ್ಲಿ ಆದ ಅನುಭವಗಳೊಂದಿಗೆ ಹೋಲಿಸಿ ಈ ಲೇಖನವನ್ನು ಮಾನಸ ಓದುಗರಿಗಾಗಿ ಬರೆದಿದ್ದಾರೆ.

ದುಡಿಮೆಯ ಬಗ್ಗೆ ತನ್ನ ತಾತ್ವಿಕ ನಿಲುವನ್ನು ವಿವರಿಸುವುದರ ಮೂಲಕ ಲೇಖಕಿ ತಾನು ಅಧ್ಯಯನ ಮಾಡಿದ ಮಹಿಳೆಯರ ಹಾಗೂ ತನ್ನ ಕಥೆಯನ್ನು ಹೇಳುತ್ತಾಳೆ. ಲೇಖಕಿಯ ಬರವಣಿಗೆಯನ್ನು ಓದುತ್ತಾ ಹೋದ ಹಾಗೆ ಅದರೊಳಗೆ ನಮ್ಮನ್ನು ನಾವು




ಗುರುತಿಸಿಕೊಳ್ಳುವುದರೊಂದಿಗೆ ಆಕೆಯ ಅಭಿಪ್ರಾಯದ ಬೆಳಕಿನಲ್ಲಿ ನಮ್ಮ ಜೀವನವನ್ನು ನೋಡಿಕೊಳ್ಳುವಂತೆ ಒತ್ತಾಯಿಸುತ್ತದೆ.

ನಾನು ಕೆಲಸ ಮಾಡುವುದರ ಬಗ್ಗೆ ನನಗೆ ಅನುಮಾನವೇ ಇರಲಿಲ್ಲ. ನನಗೆ ಹಾಗೂ ನನ್ನ ಸ್ನೇಹಿತೆಯರಿಗೆ, ಉದ್ಯೋಗ, ಸ್ವಾತಂತ್ರ್ಯದ ಒಂದು ಹಾದಿಯಾಗಿತ್ತು. ಉದ್ಯೋಗ ನಮ್ಮ ಸ್ವಂತಿಕೆಯ ಅಭಿವ್ಯಕ್ತಿಗೆ ಒಂದು ಅವಕಾಶವನ್ನು ನೀಡಿತ್ತು. ಮನೆಯ ನಾಲ್ಕುಗೋಡೆಯ

ಹೊಸಿಲಿನಿಂದಾಚೆ ಹೊರ ಹೋಗಿ ದುಡಿಯುವುದು, ಬಿಡುಗಡೆ ಹಾಗೂ ಸಬಲತೆಯ ಅಥವಾ ಮದುವೆಯಾಗಿ ಮನೆಯಲ್ಲಿ

ಕುಳಿತಿರುವುದು ಉಸಿರು ಗಟ್ಟಿಸುವ ಅರ್ಥಹೀನ ಬದುಕಿನ ನಡುವಿನ ಆಯ್ಕೆಯಾಗಿತ್ತು. ನಾವು ಕೇವಲ ಶ್ರೀಮತಿಯಾಗಿರುವುದಕ್ಕಿಂತ ನಮ್ಮ ಸ್ವಂತ ವ್ಯಕ್ತಿತ್ವವನ್ನು ರೂಢಿಸಿಕೊಳ್ಳುವ ಬಯಕೆ ಉಳ್ಳವರಾಗಿದ್ದೆವು. ನಾಲ್ಕು ಗೋಡೆಯಿಂದಾಚೆ ಒಂದು ಹೊಸ ಪ್ರಪಂಚವನ್ನು ನೋಡ ಬಯಸಿದ್ದೆವು.

ಈ ಕಾರಣದಿಂದಲೇ ನಾನು ಸಿವಿಲ್ ಸರ್ವೀಸ್ ಪರೀಕ್ಷೆಯನ್ನು ತೆಗೆದುಕೊಂಡು 1982 ರಲ್ಲಿ ಉತ್ತೀರ್ಣಳಾಗಿ ಕಸ್ಟಮ್ಸ್ ಹಾಗೂ ಎಕ್ಸೈಜ್ ಇಲಾಖೆಯಲ್ಲಿ ಉದ್ಯೋಗಕ್ಕೆ ಸೇರಿದೆ. ಇದು ನನ್ನ ಜ್ಞಾನ ಹಾಗೂ ಸಾಮರ್ಥ್ಯವನ್ನು ಪರೀಕ್ಷಿಸುವ ಹಾಗೂ ಎಲ್ಲ ತರದ ಜನರೊಂದಿಗೆ ವ್ಯವಹರಿಸುವ ಸವಾಲೆಸೆಯುವಂತಹ ಉದ್ಯೋಗವಾಗಿತ್ತು. ನನ್ನನ್ನು ವಾರಣಾಸಿಗೆ ಹಾಕಲಾಯಿತು. ಐದು ಜಿಲ್ಲೆಗಳ ಉಸ್ತುವಾರಿಯುಳ್ಳ ಸ್ವತಂತ್ರ ಕಛೇರಿ, ಸುಮಾರು ನೂರು ಜನರ ಸಿಬ್ಬಂದಿ ವರ್ಗ. ಕೈಗಾರಿಕೆ, ಚಿನ್ನದ ವ್ಯಾಪಾರ, ಕಳ್ಳಸಾಗಾಣಿಕೆ ಮುಂತಾದವುಗಳ ಬಗ್ಗೆ ವ್ಯವಹರಿಸ ಬೇಕಾಗಿತ್ತು. ಪ್ರಾರಂಭದಲ್ಲಿ ಹೆದರಿದ್ದ ನಾನು ಕ್ರಮೇಣ ನನ್ನ ಅನುಭವಿ ಸಿಬ್ಬಂದಿ ವರ್ಗದ ಸಹಕಾರದಿಂದ ನನ್ನ ತಿಳುವಳಿಕೆಯನ್ನು ಹೆಚ್ಚಿಸಿಕೊಳ್ಳುವುದರ ಜೊತೆಗೆ ಗೌರವ ಹಾಗೂ ವಿಶ್ವಾಸವನ್ನು ಗಳಿಸಿದೆ. ನನಗೇ ಅರಿವಿಲ್ಲದೆ ನನ್ನ ಸಾಮರ್ಥ್ಯವನ್ನು ಗುರುತಿಸಿಕೊಳ್ಳುವುದರ ಜೊತೆಗೆ ಸಂತೋಷದಿಂದ ಕೆಲಸವನ್ನು ಕಲಿಯ ತೊಡಗಿದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ನಾನು ಏನನ್ನು ನಿರೀಕ್ಷಿಸುತ್ತಿದ್ದೆನೊ ಅದನ್ನು ಉದ್ಯೋಗ ನನಗೆ ನೀಡಿತು. ವೈಯಕ್ತಿಕ ಬೆಳವಣಿಗೆ, ಸ್ವತಂತ್ರ ವ್ಯಕ್ತಿತ್ವ ಹಾಗೂ ಸಶಕ್ತತೆಯನ್ನು ನೀಡಿತು.

ಅದೇ ಸಮಯದಲ್ಲಿ ನನಗೆ ಮದುವೆಯಾಯಿತು. ನನ್ನ ವೃತ್ತಿ ಜೀವನದ ಪ್ರಾರಂಭದಲ್ಲಿಯೇ ಎರಡು ಮಕ್ಕಳ ತಾಯಿಯಾದೆ. ಮನೆಯ ಕಡೆ ಗಮನ ಕೊಡಲೇ ಬೇಕಾದ ಒತ್ತಡ ಎರಡನ್ನು ಹೇಗೆ ನಿಭಾಯಿಸುವುದು ?

ಎಲಿಜಬೆತ್‌ಳ ಪ್ರಕಾರ ನಮ್ಮ ತಂದೆ ಅವರ ವೃತ್ತಿ ಜೀವನದಲ್ಲಿ ಹೇಗಿದ್ದರೋ ನಾವು ಹಾಗಿರಲು ಬಯಸುತ್ತೇವೆ. ಅದೇ ಸಮಯದಲ್ಲಿ ನಮ್ಮ ತಾಯಂದಿರು ಕುಟುಂಬಕ್ಕೆ ನೀಡಿದ ಕಾಳಜಿಯನ್ನು ನಾವು ನೀಡ ಬಯಸುತ್ತೇವೆ. ಆದರೆ ಇದು ಸಾಧ್ಯವಿಲ್ಲದ ಸಂಗತಿ. ಏಕೆಂದರೆ ನಾವು ನಮ್ಮ ಬಾಲ್ಯದಲ್ಲಿ 'ಉದ್ಯೋಗ' ಹಾಗೂ 'ಮನೆ' ಗೆ ಸಂಬಂಧ ಪಟ್ಟ ಹಾಗೆ ಎರಡು ವಿಭಿನ್ನ ಗ್ರಹಿಕೆಯನ್ನು ಅಂತರ್ಗತಗೊಳಿಸಿ ಕೊಂಡಿರುತ್ತೇವೆ. ಅವೆರೆಡು ವಿಭಿನ್ನ ಕ್ಷೇತ್ರಗಳಾಗಿದ್ದು ಪೂರ್ಣ ಸಮಯವನ್ನು ನಿರೀಕ್ಷಿಸುತ್ತವೆ. ಅವು ವಿಭಿನ್ನ ಮೌಲ್ಯವನ್ನು ಒಳಗೊಂಡಿರುತ್ತವೆ. ನಾವು ಅವುಗಳೆರಡನ್ನು ನುಂಗಲು ಪ್ರಯತ್ನಿಸುವುದರ ಜೊತೆಗೆ ಜೊತೆಗೆ ಒಣ ಬಡಾಯಿಯೊಂದಿಗೆ ಯಶಸ್ವಿ ಮಾದರಿ ಮಹಿಳೆಯಾಗಲು ಪ್ರಯತ್ನಿಸುತ್ತೇವೆ. ಇದರ ಪರಿಣಾಮವೆಂದರೆ, ಎರಡು ವಿಭಿನ್ನ ಕ್ಷೇತ್ರದ ಮೌಲ್ಯಗಳನ್ನು ಜೀರ್ಣಿಸಿ ಕೊಳ್ಳುವ ಪ್ರಯತ್ನದಲ್ಲಿ ನಮ್ಮ ವ್ಯಕ್ತಿತ್ವದ ಅಂತರದಲ್ಲಿ ಅಜೀರ್ಣತೆ ಉಂಟಾಗುತ್ತದೆ. ಅಂದರೆ ಒಂದು ರೀತಿಯ ದುಗುಡ, ಒತ್ತಡ, ಆತಂಕದ ರೂಪದಲ್ಲಿ ನಮ್ಮನ್ನು ಮುತ್ತಿಕೊಳ್ಳುತ್ತದೆ.

ನಾನು ಚುರುಕಾಗಿ ಕೆಲಸ ಮಾಡುವುದನ್ನು ಕಲಿತೆ. ನನ್ನ ಪ್ರಯತ್ನದ ಹಿಂದಿರುವ ಪೊಳ್ಳುತನದ ಅರಿವು ನನಗಿಲ್ಲದಿದ್ದರೂ ನಾನು ಕಷ್ಟ ಪಡುವುದನ್ನು ಮುಂದುವರಿಸಿದೆ. ಚಿಕ್ಕವಳು ಹಾಗೂ ಉತ್ಸಾಹಭರಿತಳಾದುದರಿಂದ ನಾನು ಇತರ ಚಿಕ್ಕ ವಯಸ್ಸಿನ ದುಡಿಯುವ ತಾಯಂದಿರ ಹಾಗೆ ಯಶಸ್ಸನ್ನು ಪಡೆದೆ. ಕ್ರಮೇಣ ನಾನು ಆಯಾಸಗೊಂಡಿದ್ದೆ. ಮನೆ ಒಂದು ರೀತಿಯಲ್ಲಿ ಅವ್ಯವಸ್ಥೆಯ ಗೂಡಾಗಿತ್ತು. ಆದರೆ ಮಕ್ಕಳು ಬುದ್ಧಿವಂತರಾಗಿ, ಖುಶಿಯಾಗಿ, ಆರೋಗ್ಯವಂತರಾಗಿದ್ದರು. ಅದು ನನಗೆ ಮುಖ್ಯ ಸಂಗತಿಯಾಗಿತ್ತು.

ಮೆಕ್ಕೆನ್ನಾ ಮಹಿಳಾ ವಿಮೋಚನೆಯ ಈ ಹಂತವನ್ನು ವಿವರಿಸುತ್ತಾರೆ. ಪುರುಷಾಧಿಕಾರಕ್ಕೆ ಒಳಪಟ್ಟ ಸವಾಲೆಸೆಯುವ ಉದ್ಯೋಗಗಳನ್ನು ಅಪ್ಪಿಕೊಂಡ ಹೆಂಗಸರ ಪ್ರಾತಿನಿಧ್ಯ ಈ ಹಂತದಲ್ಲಿ ಕಂಡು ಬರುತ್ತದೆ. ಇದು ಮೊದಲನೆಯ ಹಂತ ಎಂದು ಗುರುತಿಸುವ ಮಕ್ಕೆನ್ನ ಇಲ್ಲಿ ಪುರುಷರು ತಾನು ಕುಳಿತಿರುವ ಬೆಂಚ್‌ಗಳಿಂದ ಸ್ವಲ್ಪ ಸರಿದು ಜಾಗ ಮಾಡಿ ಕೊಡಬೇಕಾಗುತ್ತದೆ ಎನ್ನುತ್ತಾರೆ. ಕೆಲವು ಮಹಿಳೆಯರು ಈ ಜಾಗ ಆಕ್ರಮಿಸಿಕೊಂಡರು. ಆದರೆ ಬೇರೆ ಏನೂ ಬದಲಾವಣೆಯಾಗಲಿಲ್ಲ. ಉದ್ಯೋಗಗಳು ಹಳೆಯ ಸ್ವರೂಪದಲ್ಲಿಯೇ ನಡೆಯುತ್ತಿದ್ದವು. ಮಹಿಳೆಯರು ಉದ್ಯೋಗದಲ್ಲಿ ಪುರುಷರ ಮೌಲ್ಯಗಳನ್ನು, ಮನೆಯಲ್ಲಿ ಹೆಂಗಸರ ಮೌಲ್ಯಗಳ ಜೊತೆಗೆ ಹೊಂದಿಸಿಕೊಂಡು ಈ ಎರೆಡೂ ಪ್ರಪಂಚಗಳ ನಡುವೆ ಓಡುತ್ತಾ ಎರೆಡೂ ಮೌಲ್ಯಗಳ ವ್ಯವಸ್ಥೆಯ ನಿರ್ವಾಹಕರಾಗಿ ಇರಬೇಕಾಯಿತು.

ಕೆಲಸದ ಹಿಂದಿರುವ ಪುರುಷ ದೃಷ್ಟಿಕೋನ ಹಾಗೂ ಸಂಪ್ರದಾಯ ಶೈಲಿಯಲ್ಲಿ ಕೆಲಸ ನಡೆದ ಹಾಗೂ ನಡೆಯುತ್ತಿರುವ ರೀತಿ ಶ್ರೇಣೀಕೃತವಾಗಿದೆ. ರೇಖಾತ್ಮಕವಾಗಿದೆ. ಇದು ಅಗತ್ಯವಾಗಿ ಬದಲಾವಣೆಯಾಗಬೇಕಾಗಿದೆ.

ಮೊದಲು ನಾನು ಶ್ರೇಣೀಕೃತ ವ್ಯವಸ್ಥೆಯ ಬಗ್ಗೆ ಹೇಳುತ್ತೇನೆ. ಅಲಹಬಾದಿನಲ್ಲಿರುವ ಕಛೇರಿಗೆ ನಾನು ಮೊದಲು ಸೇರಿದೆ. ವಾರಣಾಸಿಯಿಂದ ಅಲಹಾಬಾದ್‌ಗೆ ಪ್ರಯಾಣಿಸಲು ಮೂರು ಗಂಟೆ ಸಮಯ ತೆಗೆದುಕೊಳ್ಳುತ್ತದೆ. ಆಗಾಗ ಅಲ್ಲಿ ಸಭೆಯನ್ನು ಕರೆಯಲಾಗುತ್ತಿತ್ತು. ಆ ಸಭೆಗೆ ಬೆಳಿಗ್ಗೆ ಹೋಗಿ ಸಾಯಂಕಾಲ ವಾಪಸ್ಸು ಬರಬಹುದಾಗಿತ್ತು. ಆದರೆ ಒಂದು ವರ್ಷದ ನಂತರ ಸಮಸ್ಯೆ ಪ್ರಾರಂಭವಾಯಿತು. ಹೊಸ ಕಮಿಷನರ್ ಅಲ್ಲಿಗೆ ಬಂದಿದ್ದ. ಈತ ಸಾಯಂಕಾಲ ಸಭೆ ಮುಗಿದ ನಂತರ ಊಟದ ವ್ಯವಸ್ಥೆ ಮಾಡಿಸ ತೊಡಗಿದ. ಎಲ್ಲರೂ ಊಟಕ್ಕೆ ಇರಬೇಕೆಂದು ಒತ್ತಾಯಿಸ

ತೊಡಗಿದ.

ಆದರೆ ನನ್ನ ಮಕ್ಕಳು ಎಳೆಯವಾದುದರಿಂದ ಹಾಗೂ ಅವು ನಿದ್ರೆ ಮಾಡುವ ಸಮಯದಲ್ಲಿ ನಾನಿರಲೇ ಬೇಕಾದುದರಿಂದ ನಾನು ಊಟಕ್ಕಿರಲು ಒಪ್ಪಿಕೊಳ್ಳಲಿಲ್ಲ. ಆದರೆ ಕೆಲಸದ ಅಗತ್ಯಕ್ಕಾಗಿ ಇರುವುದಾದರೆ ಯಾವುದೇ ಹಿಂಜರಿಕೆಯಿಲ್ಲದೆ ಒಪ್ಪಿಕೊಳ್ಳುತ್ತಿದ್ದೆ.

ದಿನ ನಿತ್ಯದ ಅಗತ್ಯಗಳಿಗಾಗಿ ದುಡಿಯುವ ಮಹಿಳೆ ಈ ರೀತಿ ಸಮತೋಲನವನ್ನು ಮಾಡಲೇ ಬೇಕಾಗುತ್ತದೆ. ಅವನು ನನಗೆ ಹಲವಾರು ವಿಧದಲ್ಲಿ ಕಿರುಕುಳ ಕೊಡಲು ಪ್ರಾರಂಭಿಸಿದ. ಆತನೊಡನೆ ನನ್ನ ಸಂಬಂಧ ಹಾಳಾಗಿತ್ತು. ಪ್ರಶಸ್ತಿಗಾಗಿ ಹೆಸರುಗಳನ್ನು ಸೂಚಿಸುವಾಗ ಉದ್ದೇಶ ಪೂರ್ವಕವಾಗಿ ಅವನು ನನ್ನನ್ನು ಕಡೆಗೆಣಿಸಿದ. ಪ್ರಶಸ್ತಿ ಪಡೆದವರ ಪಟ್ಟಿಯು ಪ್ರಕಟಣೆಯಾದಾಗ ಇದು ನನಗೆ ಮನವರಿಕೆಯಾಯಿತು. ಅವರ ಸಾಧನೆಗೆ ಹೋಲಿಸಿದರೆ ನನ್ನ ಕಾರ್ಯಕ್ಷಮತೆ ಅವರಿಗಿಂತ ಉತ್ತಮವಾಗಿತ್ತು. ಈ ವಿಚಾರದಲ್ಲಿ ಅವನೊಡನೆ ನೇರ ಸಂಘರ್ಷಕ್ಕೆ ಇಳಿದಾಗ ಆತ ಕುಂಟು ನೆಪ ಹೇಳ ತೊಡಗಿದ.

ಈ ತರದ ಘಟನೆಗಳು ಯಾವಾಗಲು ನಡೆಯುತ್ತವೆ. ವೃತ್ತಿಯಲ್ಲಿ ಯಶಸ್ಸನ್ನು ಪಡೆಯುವುದು ನಿಮ್ಮ ಸಾಮರ್ಥ್ಯದ ಒಂದು ಸಣ್ಣಭಾಗ ಎಂಬುದು ಈಗ ಅರಿವಾಗಿದೆ. ಅದು ನಮ್ಮ ವೃತ್ತಿ ಜೀವನದ ಗ್ರಾಫ್‌ನ್ನೂ ನಿರ್ಧರಿಸುವ ವ್ಯಕ್ತಿಗಳನ್ನು ಅವಲಂಬಿಸಿದೆ.

ನಮ್ಮ ಲೇಖಕಿ ಮಾರ್ಸಿಯು ಕ್ರಾಫ್ ಅವರನ್ನು ಉಲ್ಲೇಖಿಸುತ್ತಾರೆ. (ಮೇಕಿಂಗ್ ವರ್ಕ ಫ್ಲೆಕ್ಸಿಬಲ್ : ಕೆಬ್‌ಲಿಸ್ಸ್, ನ್ಯೂಯಾರ್ಕ್ 1996) ಅವರ ಉದ್ಯೋಗದ ರಚನೆಗಳು ಹೀಗಿವೆ :

ಸಂಪ್ರದಾಯವಾದಿ ಮಾದರಿಯ ಪ್ರಕಾರ ಒಬ್ಬರನ್ನು ನೋಡಿಕೊಳ್ಳುವುದಕ್ಕೋಸ್ಕರ ಅಲ್ಲಿ ಇನ್ನೊಬ್ಬರು ಇರುತ್ತಾರೆ. ಇದು ಶ್ರೇಣೀ ಕೃತವಾಗಿ ಏಣಿಯ ತುದಿಯವರೆಗೆ ಮುಂದುವರೆಯುತ್ತದೆ. ಇದು ಆಜ್ಞಾಪನೆ ಹಾಗೂ ನಿಯಂತ್ರಣದ ಸ್ವರೂಪದ್ದು. ನಾನು ನಿನ್ನನ್ನು ಸ್ವಲ್ಪವೇ ಮಾತ್ರ ನಂಬುತ್ತೇನೆ. ಆದ್ದರಿಂದ ನೀನು ಇಲ್ಲಿದ್ದೀಯ ಎಂಬುದನ್ನು ನಾನು ಖಾತ್ರಿ ಮಾಡಿಕೊಳ್ಳುತ್ತೇನೆ. ನೀವು ಏನು ಮಾಡಬೇಕೆಂಬುದನ್ನು ನಾನು ಹೇಳುತ್ತೇನೆ ಹಾಗು ನೀನು ಅದನ್ನು ಸರಿಯಾಗಿ ಮಾಡಿದ್ದೀಯ ಎಂಬುದನ್ನು ಕೂಡಾ ನಾನು ಖಾತ್ರಿ ಪಡಿಸಿಕೊಳ್ಳುತ್ತೇನೆ.

ಈ ಮಾದರಿಯಲ್ಲಿ ನೌಕರರು ಸರಿಯಾಗಿ ಕೆಲಸ ಮಾಡುತ್ತಾರೋ ಇಲ್ಲವೊ ಎನ್ನುವುದು ಸೂಪರ್ ವೈಜರ್‌ನನ್ನು ಅವಲಂಭಿಸಿದೆ.

ನಿರ್ದಿಷ್ಟ ವಿಶೇಷ ಜವಾಬ್ದಾರಿ, ಗೌರವ ಪ್ರಶಸ್ತಿ ಎಲ್ಲವು ಸೂಪರ ವೈಜರ್‌ನ ಕೈಯಲ್ಲಿದೆ. ಆದುದರಿಂದ ಜನರು ಸಹಜವಾಗಿ ಬಾಸ್ ಜೊತೆ ಉತ್ತಮ ಬಾಂಧವ್ಯ ಹೊಂದಿರಬೇಕೆಂದು ಭಾವಿಸಿರುತ್ತಾರೆ. ಮೆಕೆನ್ನಾ ಹೇಳುವಂತೆ 'ಈ ಪದ್ಧತಿ ಅರ್ಥಹೀನವಾಗುತ್ತಿರುವುದರ ಜೊತೆಗೆ, ಚರ್ಚೆ, ಮಾತುಕತೆಯ ಹಾದಿಯನ್ನು ಸೂಕ್ಷ್ಮಗೊಳಿಸುತ್ತದೆ. ಇದು ಎಲ್ಲಾ ಕಡೆ ಕಂಡು ಬರುವುದರ ಜೊತೆಗೆ ಬದಲಾವಣೆಯನ್ನು ವಿರೋಧಿಸುತ್ತದೆ. ಕೆಲಸ ಮಾಡುವ ನೌಕರರು ಅಧಿಕಾರವುಳ್ಳ ಉನ್ನತ ಸ್ಥಾನಕ್ಕೆ ಏರುವುದರೊಳಗೆ ಅವರು ವ್ಯವಸ್ಥೆಯ ಒಂದು ಭಾಗವಾಗಿರುತ್ತಾರೆ. ಜೊತೆಗೆ ಅದನ್ನು ಆದರಿಸುತ್ತಾರೆ.

ದುರಾದೃಷ್ಟಕ್ಕೆ ಈ ಅಧಿಕಾರಿಗಳು ಮನುಷ್ಯರು ಮಾತ್ರ. ಅವರ ಅಹಂ ಒಂದು ರೀತಿಯಲ್ಲಿ ನಾಜೂಕಾಗಿರುತ್ತದೆ. ಹಾಗೂ ಅವರ ನಿರ್ಧಾರಗಳು, ವೈಯಕ್ತಿಕ ನೆಲೆಯಲ್ಲಿರುತ್ತದೆ. ಈ ಅಂಶದಿಂದ ದುಡಿಯುವ ಸ್ಥಳದಲ್ಲಿ ಸವಲತ್ತುಗಳನ್ನು ಪಡೆಯುವುದುಕ್ಕೋಸ್ಕರ, ರಾಜಕೀಯ ಮಾಡುವುದು, ತಮಾಷೆ ಮಾಡುವುದು, ಕುತಂತ್ರ ಮಾಡುವಂತಹ ಸನ್ನಿವೇಷವನ್ನು ಹುಟ್ಟು ಹಾಕುತ್ತದೆ.

ಮೆಕ್ಕೆನ್ನಾ ಹೇಳುವಂತೆ "ರಾಜಕೀಯ ಮಾಡುವುದನ್ನು, ಬೆನ್ನಿಗೆ ಚೂರಿ ಹಾಕುವುದನ್ನು ಮೌನವಾಗಿ ನೋಡುತ್ತಾ, ನಮ್ಮ ಚೈತನ್ಯಗಳೆ ಸವೆದು ಹೋಗುತ್ತವೆ. ಯಾವಾಗಲೂ ಬಿಕ್ಕಟ್ಟಿನ, ಒತ್ತಡದ ಸ್ವಭಾವದಲ್ಲೆ ಬದುಕುತ್ತಿರುತ್ತೇವೆ. ಇದು ನಮ್ಮ ಕೆಲಸವನ್ನು ಉತ್ತಮವಾಗಿ ಅಥವಾ ಫಲಪ್ರದವಾಗಿ ಮಾಡುವುದಕ್ಕೆ ಸಂಬಂಧ ಪಟ್ಟಿರುವುದಕ್ಕಿಂತ, ಆಜ್ಞೆಗಳನ್ನು ಅಹಂನನ್ನು ಪಾಲಿಸುವುದಕ್ಕೆ ಸಂಬಂಧ ಪಟ್ಟಿರುತ್ತದೆ". ಉತ್ತಮವಾಗಿ ಕಾರ್ಯನಿರ್ವಹಿಸುವುದು ಹಾಗೂ ದಕ್ಷತೆ ಯಿಂದ ಕೆಲಸ ಮಾಡುವುದಕ್ಕೆ ಬದಲಾಗಿ ಸದಾ ಆಜ್ಞೆಗಳನ್ನು ಜಾರಿಗೊಳಿಸುವುದು ಹಾಗೂ ಅವರ ಅಹಂನನ್ನು ಒಪ್ಪಿಕೊಳ್ಳುವುದಕ್ಕೆ ಸಂಬಂಧ ಪಟ್ಟಿರುತ್ತದೆ.

ಇಂತಹ ಸಂದರ್ಭದಲ್ಲಿ ಏನು ಮಾಡುವುದು ? ಮೆಕ್ಕೆನ್ನಾ ಕೆಲಸ ಮಾಡುತ್ತಿದ್ದ ಜಾಗದಲ್ಲಿದ್ದ ಆಕೆಯ ಸಲಹೆಗಾರರು ನೀಡಿದ ಸಲಹೆ ಏನೆಂದರೆ "ಯುದ್ಧ ಪ್ರಾರಂಭಿಸಬೇಕು".ಇದರ ಹಿಂದಿನ ಕಾರಣ ಹೀಗಿದೆ. ನೀವು ನಿಮ್ಮ ಅಧಿಕಾರಿಯ ಜೊತೆ ಭಿನ್ನಾಭಿಪ್ರಾಯ ಹೊಂದಿರುವಾಗ ನೀವು ಋಣಾತ್ಮಕ ಶ್ರಮವನ್ನು ಸೃಷ್ಟಿ ಮಾಡುತ್ತಿರುತ್ತೀರಿ. ಇದು ನಿಮ್ಮ ಕೆಲಸದ ಎಲ್ಲಾ ವಿಭಾಗಗಳಲ್ಲೂ ಪ್ರಭಾವ ಬೀರುತ್ತಿರುತ್ತದೆ. ಹಾಗಾಗಿ ನಿಮ್ಮ ಪ್ರಾಮಾಣಿಕ ಅಭಿಪ್ರಾಯ ಅಭಿವ್ಯಕ್ತಿಗೊಳಿಸುವ ಮೊದಲೇ, ಉದ್ಯೋಗ ಸಂಬಂಧಿತ ನಿಮ್ಮ ಅಭಿಪ್ರಾಯಗಳು ನಿಮ್ಮ ಮೇಲಾಧಿಕಾರಿಯ ಅಭಿಪ್ರಾಯಗಳ ಜೊತೆ ಸರಿ ಹೊಂದದಿದ್ದಾಗ, ಯೋಚಿಸಿ ಕ್ರಮ ತೆಗೆದುಕೊಳ್ಳಿ. ಇದರಿಂದ ಉಂಟಾಗುವ ನಿಮ್ಮ ಪತನ, ಅವನತಿ ಯೋಗ್ಯವಾದದ್ದೇ ಎಂದು ಆಲೋಚಿಸಿ, ಈ ಅವನತಿ, ಪತನ ಬೇರೆ ಬೇರೆ ಹಂತಗಳಲ್ಲಿ ನಡೆಯುತ್ತದೆ. ಕೆಲವೊಮ್ಮೆ ಈ ಘರ್ಷಣೆಗಳಿಂದ ನಿಮ್ಮ ಕೆಳಗಿನವರಿಗೇ ಮುಜುಗರ ಉಂಟಾಗಬಹುದು.

ತೆರಿಗೆ ವಂಚನೆಯ ಕುರಿತು ಬೇಹುಗಾರಿಕೆಯ ಕೆಲಸದ ಜವಾಬ್ದಾರಿಯನ್ನು ನನಗೆ ವಹಿಸಲಾಗಿತ್ತು. ಈ ಕೆಲಸಕ್ಕಾಗಿ ನನ್ನ ಜೊತೆಗೆ ಪುಟ್ಟದಾದ, ಸಮರ್ಥವಾದ ಒಂದು ಟೀಮ್ ಇತ್ತು. ಯಾವುದೇ ಅಡ್ಡಿ ಆತಂಕ ಗಳಿಲ್ಲದೆ ಕೆಲಸ ಮಾಡುವುದು ಅವರಿಗೆ ಸಂತೋಷವನ್ನು ನೀಡುತ್ತಿತ್ತು. ಇದರಿಂದಾಗಿ ಅವರಿಗೆ ಆಗಾಗ ಬಹುಮಾನ ಹಾಗೂ ಕೆಲಸದಿಂದ ತೃಪ್ತಿ ದೊರೆಯುತ್ತಿತ್ತು. ಆದರೆ ನನ್ನ ಹಿರಿಯ ಅಧಿಕಾರಿ ತೆರಿಗೆಯನ್ನು ವಂಚಿಸುತ್ತಿದ್ದವರ ಜೊತೆಯಲ್ಲಿ ಆಪ್ತವಾಗಿದ್ದು ನನ್ನ ಮೇಲೆ ತನ್ನ ಪ್ರಭಾವವನ್ನು ಬೀರಲು ಯತ್ನಿಸಿದ. ನನ್ನನ್ನು ವಿರೋಧಿಸ ತೊಡಗಿದ. ನಮ್ಮ ಸಿಬ್ಬಂದಿ ವರ್ಗದವರು ಅಸಹನೆಯಿಂದ ಇರುತ್ತಿದ್ದರು. ಏಕೆಂದರೆ ನನ್ನ ಅವಧಿ ಮುಗಿದ ನಂತರ ಅವರು ಆತನನ್ನು ಬೆಂಬಲಿಸಿ ಕೆಲಸ ಮಾಡುವುದು ಅನಿವಾರ್ಯವಾಗಿತ್ತು. ಅವರಲ್ಲೊಬ್ಬರು ಹೊಂದಾಣಿಕೆ ಮಾಡಿಕೊಂಡು ಹೋಗುವಂತೆ ಸಲಹೆ ನೀಡುತ್ತಿದ್ದರು. ಆದರೆ ಇದು ಕೆಲಸವನ್ನು ಸ್ಥಗಿತ ಗೊಳಿಸುತ್ತಿದೆ ಎನ್ನುವುದರ ಅರಿವು ಸಲಹೆ ನೀಡಿದವರಿಗಿರಲಿಲ್ಲ.

ನಿಜವಾಗಿಯೂ ನಾನು ಯುದ್ಧ ಪ್ರಾರಂಭಿಸಿದ್ದೆ. ಈ ತರದ ಒಂದು ಸಣ್ಣ ಯುದ್ಧದಿಂದಾಗಿ ದೀರ್ಘಾವಧಿಯಲ್ಲಿ ಸಂಬಂಧ ಹಾಳಾಗುತ್ತದೆ. ನೀವು ಹೊಂದಾಣಿಕೆ ಮಾಡಿಕೊಳ್ಳದವರಾದ್ದರಿಂದ ಅನಾನುಕೂಲ ವ್ಯಕ್ತಿಯೆಂದು ಹಣೆ ಪಟ್ಟಿ ಹಚ್ಚಲಾಗುತ್ತದೆ. ಮೆಕೆನ್ನಾ ಗುರುತಿಸುವಂತೆ, ಇದು ಬಾಸ್ ಅಥವಾ ಹಿರಿಯ ಅಧಿಕಾರಿಯ ಹುಚ್ಚು ತನದ ಪರಿಣಾಮವಾಗಿ ಈ ರೀತಿಯ ಹಣೆಪಟ್ಟಿಯನ್ನು ಹಚ್ಚಲಾಗುತ್ತದೆಯೇ ವಿನಃ ಕಾರ್ಯದಕ್ಷತೆಯ ಆಧಾರದ ಮೇಲೆ ಅಲ್ಲ.

ಹಿರಿಯ ಅಧಿಕಾರಿಗಳಲ್ಲಿ ಕಂಡುಬರುವ ಇನ್ನೊಂದು ಸಮಸ್ಯೆಯೆಂದರೆ ಅವರು ಅಧಿಕಾರವನ್ನು ಇಷ್ಟ ಪಡುತ್ತಾರೆ. ಇದನ್ನು ಜಾರಿಗೊಳಿಸಲು ನೀವು ಒಂದು ವಸ್ತುವಾಗಿ ಅವರಿಗೆ ಲಭ್ಯವಾಗಬೇಕು. ಆದುದರಿಂದ ಕಛೇರಿಯಲ್ಲಿರುವುದು ಹಾಗೂ ಬಾಸ್ ಜೊತೆಗೆ ನೇರವಾದ ಸಂಪರ್ಕ ಹೊಂದುವುದು, ಸಂಸ್ಥೆಯಲ್ಲಿ ನೀವು ಗಂಭೀರವಾದ ವ್ಯಕ್ತಿಯೆಂಬ ಗೌರವವನ್ನು ಬೆಳಸಿಕೊಳ್ಳಲು ಸಾಧ್ಯವಾಗುತ್ತದೆ. ನಿಗದಿತವಿರದ ಸಮಯ, ಅರೆಕಾಲಿಕ ಕೆಲಸ ಮುಂತಾದವು ನಿಮ್ಮ ವೃತ್ತಿ ಜೀವನದ ಮೆಟ್ಟಲೇರಲು ಸಹಕಾರಿಯಾಗಿರುವುದಿಲ್ಲ. ಇಲ್ಲಿ ಫಲಿತಾಂಶಕ್ಕೆ ಮಹತ್ವ ನೀಡದೆ ಕೆಲಸ ಮಾಡುವ ಪ್ರಕ್ರಿಯೆಯನ್ನು ಪರಿಗಣಿಸಲಾಗುತ್ತದೆ. ಇದು ನೌಕರರ ನಡುವೆ ಪ್ರತಿಸ್ಪರ್ಧೆ, ವ್ಯಕ್ತಿ ಪೂಜೆ, ಕೃಪಾಕಟಾಕ್ಷೆ ಮುಂತಾದವುಗಳಿಗೆ ದಾರಿ ಮಾಡಿ ಕೊಡುತ್ತದೆ. ವಸ್ತುನಿಷ್ಠವಾಗಿ ಪ್ರಕ್ರಿಯೆಯನ್ನು ಅಳೆಯುವ ಸಾಧ್ಯತೆ ಇರುವುದಿಲ್ಲ. ಕೆಲಸದ ಫಲಿತಾಂಶವನ್ನು ಮಾತ್ರ ವಿವೇಚನೆಯಿಂದ ಅಳೆಯ ಬಹುದಾಗಿದೆ.

ಜೆರಾಕ್ಸ್, ಕಾರ್ಪೊರೇಶನ್ ಹಾಗೂ ಟ್ಯಾಕ್ಸ್ ಇನ್‌ಸ್ಟ್ರುಮೆಂಟ್ಸ್ ವಿಭಾಗದ ಕಾರ್ಯ ನಿರ್ವಹಣೆಯನ್ನು ಪ್ರಾಯೋಗಿಕವಾಗಿ ನಿರ್ದಿಷ್ಟ ಅವಧಿಯೊಂದಿಗೆ ಚಿಕ್ಕ ಟೀಮ್‌ಗೆ ವಹಿಸಲಾಗಿತ್ತು. ಇದಕ್ಕೆ ದೊರೆತ ಫಲಿತಾಂಶ ಆಶ್ಚರ್ಯಕರವಾಗಿತ್ತು ಕ್ರಾಫ್ ವಿವರಿಸುವಂತೆ ''ವ್ಯಕ್ತಿಗಳು ಅನಿರ್ಬಂಧವಾಗಿ, ಸ್ವತಂತ್ರವಾಗಿ ಕೆಲಸಮಾಡುವುದು ಮಾದರಿ ವ್ಯವಸ್ಥೆಯಾಗಿದೆ. ಈ ಮಾದರಿಯು ನಮ್ಮ ಉದ್ದೇಶ ಇಲ್ಲದೆ ಈ ಪ್ರಕ್ರಿಯೆಯ ನಂತರ ನಾವು ಈ ನಿರ್ದಿಷ್ಟಗುರಿಯನ್ನು ತಲುಪ ಬೇಕು. ಸೋಮವಾರದಿಂದ ಶುಕ್ರವಾರದ ವರೆಗೆ, ಬೆಳಿಗ್ಗೆಯಿಂದ ಸಂಜೆ 7 ರವರೆಗೆ ಮಾಡುವ ನಿಮ್ಮ ಕೆಲಸವನ್ನು ಅಳೆಯಲಾಗುವುದಿಲ್ಲ. ಆದರೆ ನಮ್ಮ ಕರ್ತೃತ್ವ ಶಕ್ತಿಯನ್ನು ಫಲಿತಾಂಶದ ಆಧಾರದ ಮೇಲೆ ಅಳೆಯಲಾಗುವುದು. ಈ ರೀತಿಯ ಆಲೋಚನೆ 'ಆಜ್ಞೆ ಹಾಗೂ ನಿಯಂತ್ರಣ' ಕೆಲಸದ ಸ್ವರೂಪಕ್ಕೆ ಸವಾಲೊಡ್ಡುತ್ತದೆ. ಈ ಮಾದರಿಯು ವಿಶೇಷವಾಗಿ ಮಹಿಳೆಯರಿಗೆ ಅಗತ್ಯವಿರುವ ಲಿಬರಲ್ ವಾತಾವರಣವನ್ನು, ಅವಕಾಶವನ್ನು ನೀಡುತ್ತದೆ.

ಅಧಿಕಾರಿಗಳ ಶ್ರೇಣೀಕೃತ ವ್ಯವಸ್ಥೆಯೊಡನೆ ಉದ್ಯೋಗಕ್ಕೆ ಪುರುಷಾಧಿ ಕಾರದಿಂದಲೂ ಅಂಟಿಕೊಂಡ ಇನ್ನೊಂದು ಸಂಗತಿಯೆಂದರೆ ಅದರ ಏರುಗತಿ. ಶ್ರೇಣೀಕೃತ ವ್ಯವಸ್ಥೆಯಂತೆ ಈ ಸರಳ ರೇಖಾತ್ಮಕ ಚಲನೆ ಮಹಿಳೆಯರಿಗೆ ಅನಾನುಕೂಲವಾಗಿ ರೂಪುಗೊಂಡಿದೆ.

ಸಂಪ್ರದಾಯಕ ದೃಷ್ಟಿಕೋನದಲ್ಲಿ ವೃತ್ತಿಯಲ್ಲಿ ವ್ಯಕ್ತಿಯ ಸಾಧನೆ ರೇಖಾತ್ಮಕವಾಗಿರುತ್ತದೆ. ಕೆಳಗಿನ ಹಂತದಿಂದ ಕಾಲಕ್ರಮದಲ್ಲಿ ಮೇಲಿನ ಹಂತಕ್ಕೆ ತಲುಪಲಾಗುತ್ತದೆ, ಹೀಗೆ ನೀವು ನಿಮ್ಮ ವೃತ್ತಿ ಜೀವನದಲ್ಲಿ ಮಹತ್ವದ ಘಟ್ಟ ತಲುಪುತ್ತೀರಿ. ನೀವು ಹೀಗೆಯೇ ಮುಂದುವರಿಯುವುದು ಅಗತ್ಯವಾಗುತ್ತದೆ. ಒಂದು ವೇಳೆ ನೀವು ಮಗುವನ್ನು ಶಾಲೆಗೆ ಕಳಿಸಲು, ಮೂರು ವರ್ಷ ನಿಮ್ಮ ವೃತ್ತಿಯಿಂದ ವಿರಾಮ ತೆಗೆದುಕೊಂಡರೆ ಪುನಃ ನೀವು ವಾಪಸ್ಸು ನಿಮ್ಮ ವೃತ್ತಿಯ ಸಾಧನೆಯ ಮೆಟ್ಟಿಲನ್ನೇರುವ ದಾರಿಯೇ ಇರುವುದಿಲ್ಲ.

ಮೆಕೆನ್ನಾ ಮಹಿಳೆಯೊಬ್ಬಳ ನಿದರ್ಶನವನ್ನು ನೀಡುತ್ತಾಳೆ. ಏಳು ವರ್ಷದ ನಂತರ ಮೂರು ಮಕ್ಕಳ ತಾಯಿಯಾದ ಆಕೆ ಪುನಃ ಕೆಲಸಕ್ಕಾಗಿ ಸಂದರ್ಶನಕ್ಕೆ ಹೋಗುತ್ತಾಳೆ. ಚಿಕ್ಕ ವಯಸ್ಸಿನ ಹುಡುಗಿಯೊಬ್ಬಳು ಆಕೆಯನ್ನು ಸಂದರ್ಶನ ಮಾಡುತ್ತಾಳೆ. ಕೆಲವು ವರ್ಷಗಳ ಹಿಂದಾಗಿದ್ದರೆ ಈಕೆ ಆ ಚಿಕ್ಕ ಹುಡುಗಿಯನ್ನು ತನ್ನ ಸಹಾಯಕಿಯನ್ನಾಗಿ ನೇಮಿಸಿಕೊಳ್ಳ ಬಹುದಿತ್ತು. ಆ ವೃತ್ತಿಗೆ ಅಗತ್ಯವಾದ ಅನುಭವ ಆಕೆಗಿತ್ತು. ಆದರೆ ಆಕೆಯನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಒಂದು ಪಕ್ಷ ಕೆಲಸಕ್ಕೆ ತೆಗೆದುಕೊಂಡಿದ್ದರೂ ಒಂದು ಅನೌಪಚಾರಿಕ ಸ್ಥಾನವನ್ನು ನೀಡಲಾಗುತ್ತಿತ್ತೆ ವಿನಹಃ ಗೌರವಾನ್ವಿತ ಉದ್ಯೋಗಾರ್ತಿಗೆ ನೀಡುವ ಸ್ಥಾನವನ್ನಲ್ಲ.

ಈ ರೀತಿ ಯಾಕಾಗುತ್ತದೆ! ಕೆಲವರು ಸ್ವಲ್ಪ ಸಮಯ ಉದ್ಯೋಗಕ್ಕಿಂತ ಕುಟುಂಬಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದಲ್ಲಿ ಅವರ ಬದ್ಧತೆಯನ್ನು ಪ್ರಶ್ನಿಸಲಾಗುತ್ತದೆ. ಉದ್ಯೋಗದ ಬಗ್ಗೆ ಪುರುಷರಿಗಿರುವ

ನೈತಿಕತೆ ಒಂದು ರೀತಿಯ ಭಾವನಾತ್ಮಕತೆಯನ್ನು ನಿಗೂಢತೆಯನ್ನು ಒಳಗೊಂಡಿರುತ್ತದೆ. ಪುರುಷರಿಗೆ ಉದ್ಯೋಗದ ಕಲ್ಪನೆಯು ಎಲ್ಲದಕ್ಕಿಂತ ಮುಖ್ಯವಾಗುತ್ತದೆ. ಪುರುಷರ ಕರ್ತವ್ಯ ಕುಟುಂಬದ ಕಡೆ ಇರುವುದಿಲ್ಲ.

ಬಹು ಪಾಲು ಅಮೇರಿಕಾದ ಕಂಪನಿಗಳಲ್ಲಿ ಬಿಡುವಿನ ವೇಳೆ, ಅರೆಕಾಲಿಕ ಕೆಲಸ, ಮನೆಯಿಂದಲೇ ಕೆಲಸ ಮಾಡುವುದು ಮುಂತಾದ ಆಯ್ಕೆಗಳಿವೆ. ಆದರೆ ಈ ಅನುಕೂಲಗಳನ್ನು ಪಡೆದ ಮಹಿಳೆಯ ವೃತ್ತಿ ಜೀವನ ಕುಂಠಿತವಾಗುತ್ತದೆ. ಮೆಕೆನ್ನಾ ಇದಕ್ಕೆ ಒಂದು ನಿದರ್ಶನವನ್ನು ನೀಡುತ್ತಾಳೆ. ಅಮೇರಿಕಾದ ಒಂದು ಕಂಪನಿಯ ಒಂದು ವಿಭಾಗದಲ್ಲಿ 48 ಜನ ಹೆಂಗಸರಲ್ಲಿ 7 ಜನ ಹೆಂಗಸರು ಒಂದೇ ಸಮಯದಲ್ಲಿ ಗರ್ಭಿಣಿಯರಾಗಿದ್ದರು. ಎಲ್ಲರೂ ಹೆರಿಗೆ ರಜಾ ತೆಗೆದುಕೊಳ್ಳುವುದರಿಂದ ಕಂಪನಿಯ ಕೆಲಸಕ್ಕೆ ತೊಂದರೆಯಾಗುತ್ತಿತ್ತು. ಈ ಸಮಸ್ಯೆಯ ಪರಿಹಾರಕ್ಕೆ ಅವರು ಒಂದು ಯೋಜನೆಯನ್ನು ಜಾರಿಗೊಳಿಸಲು ಪ್ರಯತ್ನಿಸಿದರು. ವಾರದಲ್ಲಿ 4 ದಿನ ಕಛೇರಿಯಲ್ಲಿ ಒಂದು ದಿನ ಮನೆಯಲ್ಲಿ ಕೆಲಸ ಮಾಡುವುದಕ್ಕೆ ಮಹಿಳೆಯರು ಒಪ್ಪಿಕೊಂಡರು. ಒಂದು ದಿನದ ವೇತನವನ್ನು ಬಿಟ್ಟು ಕೊಡಲು ಸಹ ಒಪ್ಪಿ ಕೊಂಡರು ಏಕೆಂದರೆ ಅವರು ಕೆಲಸಕ್ಕೆ ಬಂದರೆ ಮನೆಯಲ್ಲಿ ಮಗುವನ್ನೂ ನೋಡಿಕೊಳ್ಳುವುದಕ್ಕೆ ಬೇರೆಯವರನ್ನು ನೇಮಕ ಮಾಡಕೊಳ್ಳ ಬೇಕಿತ್ತು. ಆಗ ಅಷ್ಟೇ ಹಣ ಖರ್ಚಾಗುತ್ತಿತ್ತು. ಈ ರೀತಿಯಲ್ಲಿ ಬೇರೆಯವರನ್ನು ಕೆಲಸಕ್ಕೆ ತೆಗೆದುಕೊಳ್ಳಲು ಕಂಪನಿಗೆ ಹಣ ಉಳಿತಾಯವಾಗುತ್ತಿತ್ತು. ಆದರೆ, ಕಂಪನಿಯ ಅಧಿಕಾರಿಯು ಇದಕ್ಕೆ ಸಮ್ಮತಿ ನೀಡಲಿಲ್ಲ. ಏಕೆಂದರೆ ಅವನ ಹೆಂಡತಿ ಮಕ್ಕಳನ್ನು ನೋಡಿಕೊಳ್ಳುವ ಉದ್ದೇಶದಿಂದ ಕೆಲಸವನ್ನು ಬಿಟ್ಟಿದ್ದಳು. ಆತನ ನಂತರದ ಅಧಿಕಾರಿ ವಿವಾಹಿತ ಮಹಿಳೆಯಾಗಿದ್ದು ಇಬ್ಬರು ಚಿಕ್ಕಮಕ್ಕಳನ್ನು ಹೊಂದಿದ್ದಳು. ಆಕೆಯೂ ಕೂಡ ಮಹಿಳೆಯರಿಗೆ ಹಾಗೂ ಕಂಪನಿಗೆ ಇಬ್ಬರಿಗೂ ನೆರವಾಗುವಂತೆ ವಿವೇಚನಾಯುಕ್ತವಾದ ಪರಿಹಾರವನ್ನು ನೀಡಲಿಲ್ಲ. ಹಾಗಾಗಿ ಏಳು ಜನ ಮಹಿಳೆಯರು ಕೆಲಸ ಬಿಡುವುದು ಅನಿವಾರ್ಯವಾಯಿತು.

ಮೆಕೆನ್ನಾ ಹೇಳುತ್ತಾಳೆ "ಪುರುಷರ ಬೆಂಬಲ ಪಡೆಯುವ ಮಹಿಳಾ ಅಧಿಕಾರಿಗಳು ಸಂದರ್ಭಕ್ಕೆ ಹೊಂದಿಕೊಳ್ಳುವ ಹಾಗೂ ಸಮ್ಮತಿಗಾಗಿ ಸದಾ ಪುರುಷರ ಕಡೆ ನೋಡುವಂತೆ ಸಮಾಜೀ ಕರಣ ಗೊಂಡಿರುತ್ತಾರೆ". ಒಳ್ಳೆಯ ಹುಡುಗಿಯರಾಗಿರುವಂತೆ ಅವರಿಗೆ ಕಲಿಸಲಾಗುತ್ತದೆ. ಅವರು ಈ ಮೌಲ್ಯಗಳನ್ನು ಇತರ ಮಹಿಳೆಯರ ವಿರುದ್ಧ ಬಳಸುವ ಹಂತಕ್ಕು ಹೋಗುತ್ತಾರೆ. ಖಂಡಿತಾ ಇಂತಹ ಮಹಿಳೆಯರು ಆತ್ಮವಂಚನೆಯನ್ನು ಮಾಡಿಕೊಂಡಿದ್ದರೂ ತಮ್ಮ ಹೊಂದಾಣಿಕೆಯ ಸ್ವಭಾವದಿಂದಾಗಿ ವ್ಯವಸ್ಥೆಯಿಂದ ಗೌರವ ಹಾಗೂ ಮನ್ನಣೆಯನ್ನು ಪಡೆಯುತ್ತಾರೆ.

ಮದುವೆಯಾದ ಪ್ರಾರಂಭದಲ್ಲಿ ನನ್ನ ಮಹಿಳಾ ಅಧಿಕಾರಿ ವಾರಣಾಸಿಗೆ ಭೇಟಿ ನೀಡಿದ್ದರು. ಕಾರಿಡಾರ್‌ನಲ್ಲಿ ಸಮವಸ್ತ್ರಧರಿಸಿದ ಒಂದು ಮಗು ಓಡುವುದು, ಕುಣಿಯುವುದು, ಜಿಗಿಯುವುದನ್ನು ನೋಡಿ ಹುಬ್ಬು ಗಂಟಿಕ್ಕಿಕೊಂಡು ಯಾರದೀ ಮಗು ? ಎಂದು ಕೇಳಿದಳು. ಆ ಮಗು ಟೈಪಿಸ್ಟ್‌ಳ ಮಗುವೆಂದು, ಆಕೆ ಗಂಡನಿಂದ ಬೇರೆಯಾಗಿ ವಾಸಿಸುತ್ತಿರುವುದು, ಅವರಿಬ್ಬರ ನಡುವಿನ ಜಗಳವನ್ನು ವಿವರಿಸಿದೆ. ಭದ್ರತೆಗಾಗಿ, ಮಗು ನೇರವಾಗಿ ಸ್ಕೂಲಿನಿಂದ ಕಛೇರಿಗೆ ಬರುತ್ತಿತ್ತು. ಅಲ್ಲಿ ಹೋಮ್‌ವರ್ಕ ಮುಗಿಸಿಕೊಂಡು ಮನೆಗೆ ಹೋಗುವವರೆಗೆ ಆಟವಾಡಿಕೊಂಡು ಇರುತ್ತಿತ್ತು. ಮಹಿಳಾ ಅಧಿಕಾರಿಗೆ ಇದು ಇಷ್ಟವಾಗಲಿಲ್ಲ ಆಕೆ ನನ್ನ ಬಳಿ ಕಛೇರಿಯ ಶಿಸ್ತಿಗೆ ಇದು ಒಳ್ಳೆಯದಲ್ಲ ಎಂದಳು. ಆದರೆ ಆ ಮಗು ಯಾರಿಗೂ ತೊಂದರೆ ಕೊಡುತ್ತಿರಲಿಲ್ಲ. ತಾಯಿಗೂ ನೆಮ್ಮದಿಯಿಂದ ಕೆಲಸ ಮಾಡುವುದು ಸಾಧ್ಯವಾಗುತ್ತಿತ್ತು. ಆದರೆ ಮಹಿಳಾ ಅಧಿಕಾರಿಯ ಮನಸ್ಸಿನಲ್ಲಿ ಆಳವಾಗಿ ಬೇರೂರಿರುವ ಮಿತ್‌ನಿಂದಾಗಿ "ಆಕೆ ವೈಯಕ್ತಿಕವಾದುದೆಲ್ಲ ಮನೆಗೆ ಸಂಬಂಧಿ ಸಿದುದು ಅದನ್ನು ದುಡಿಯುವ ಸ್ಥಳಕ್ಕೆ ತರಬಾರದು. ದುಡಿಯುವ ಸ್ಥಳದಲ್ಲಿ ವೈಯಕ್ತಿಕ ಸಮಸ್ಯೆ ಅಥವಾ ಹೆಂಗಸರಿಂದ ವಿಚಲಿತಗೊಳ್ಳದ ಪುರುಷರ ಹಾಗೆ ನಾವಿರ ಬೇಕು.

ಪುರುಷರಿಗಿಂತ ಮಹಿಳೆ ಹೆಚ್ಚಿನ ಕೌಟುಂಬಿಕ ಜವಾಬ್ದಾರಿಯನ್ನು ಹೊಂದಿದ್ದಾಳೆ. ಮದುವೆಯಾಗದಿದ್ದರು ವಯಸ್ಸಾದ ತಂದೆ ತಾಯಿಯರನ್ನು ನೋಡಿಕೊಳ್ಳುವ ಜವಾಬ್ದಾರಿ ಆಕೆಯ ಮೇಲಿದೆ. ಈಗಿರುವ ಕೆಲಸದಲ್ಲಿ ಅವಳಿಗೆ ಲಿಬರಲ್ ಆಗಿರುವ ಸ್ವರೂಪದ ಅಗತ್ಯವಿದೆ. ಅಗತ್ಯವಾದರೆ ಕೆಲವು ವರ್ಷಗಳ ಕಾಲ ಕೆಲಸದಿಂದ ಬಿಡುವು ತೆಗೆದುಕೊಂಡು ಪುನಃ ವಾಪಸ್ಸು ಬರಬಹುದಾದ ಅವಶ್ಯಕತೆ ಅವಳಿಗಿದೆ. ವೃತ್ತಿಯ ಶ್ರೇಣೀಕರಣ ಹಾಗೂ ಉನ್ನತ ಅಧಿಕಾರಿಗಳಿಗೆ ನೀಡಿರುವ ಮಹತ್ವ ಅವಳ ಈ ಅವಶ್ಯಕತೆಗೆ ಅಡ್ಡಿಯಾಗಿದೆ.

ಇದು ಎಲ್ಲ ಹಂತದ ಮಹಿಳೆಯರಿಗೂ ಅನ್ವಯವಾಗುತ್ತದೆ. ಮುನ್ಸಿಪಲ್ ಕಾರ್ಪೊರೇಶನ್‌ನಲ್ಲಿ ದೈಹಿಕ ಶ್ರಮ ಆಧಾರಿತ ಕೆಲಸ ಮಾಡುವ ಮಹಿಳಾ ಕಾರ್ಮಿಕರಿಂದ ಹಿಡಿದು ಉನ್ನತವರ್ಗದ ಮಹಿಳಾ ಅಧಿಕಾರಿಗಳಿಗೆ ಕೌಟುಂಬಿಕ ಜವಾಬ್ದಾರಿ ಇರುವುದರಿಂದ ಕೆಲಸವನ್ನು ಬಿಡದೇ ಅವರು ಅವುಗಳನ್ನು ಪೂರೈಸ ಬೇಕಾಗುತ್ತದೆ.

ಕೆಲಸದ ಸ್ವರೂಪದಲ್ಲಿ ಬದಲಾವಣೆಯಾದರೆ ಕ್ಷೇಮ ಮಹಿಳೆಯರನ್ನೇಕೆ ಅದು ಪುರುಷರ ಜೀವನದಲ್ಲಿ ಅವರ ವ್ಯಕ್ತಿತ್ವದಲ್ಲು ಬದಲಾವಣೆಯನ್ನು ತರುವುದರ ಮೂಲಕ ಅವರನ್ನು ಪರಿಪೂರ್ಣ ಮಾನವ ಜೀವಿಗಳನ್ನಾಗಿಸುತ್ತದೆ.

ನಾನು ಸಣ್ಣ ಪ್ರಮಾಣದಲ್ಲಿ ಪ್ರಯತ್ನಿಸಿದೆ. 5 ವರ್ಷಗಳ ಕಾಲ ನಾನು ಬೆಂಗಳೂರಿನ ಒಂದು ಸಣ್ಣ ಆಫೀಸಿನಲ್ಲಿ ಅಧಿಕಾರಿಯಾಗಿದ್ದೆ. ಇದು ಗುಪ್ತ ಬೇಹುಗಾರಿಕೆಯ ಸಂಸ್ಥೆಯಾಗಿತ್ತು. ಆ ಸಮಯದಲ್ಲಿ ಈ ಸಂಸ್ಥೆ ಆರು ಮಂದಿ ಪುರುಷ ಕ್ಷೇತ್ರಾಧಿಕಾರಿಗಳಿಂದ ಹಾಗೂ ಸಹಾಯಕ

ಸಿಬ್ಬಂದಿಗಳಿಂದ ನಡೆಯಲ್ಪಟ್ಟಿತ್ತು. ಆ ಕ್ಷೇತ್ರಾಧಿಕಾರಿಗಳ ಹೆಂಡತಿಯರೆಲ್ಲ ತಮ್ಮ ಮೂವತ್ತರ ಮಧ್ಯ ವಯಸ್ಸಿನಲ್ಲಿ ಮನೆಯಿಂದ ಹೊರಗಡೆ ದುಡಿಯುತ್ತಿದ್ದವರಾಗಿದ್ದರು. ಈ ಎಲ್ಲಾ ಪುರುಷರಿಗೂ ಸಣ್ಣ ಮಕ್ಕಳಿದ್ದರು. ನಮ್ಮ ಆಫೀಸಿನ ಕೆಲಸದ ರೂಪ ರೇಖೆ ಸಾಧನೆ ಫಲಿತಾಂಶ ತೋರಿಸುವಂತದಾಗಿತ್ತು. ನಾವು ಮಾಡಬೇಕಾಗಿದ್ದೆಂದರೆ ತೆರಿಗೆ ವಂಚನೆಯ ಬಗೆಗಿನ ಬೇಹುಗಾರಿಕೆ. ಕುಳಿತು ಮಾಡುವ ಕೆಲಸವಾಗಿರಲಿಲ್ಲ. ನಿಜವಾದ ಅರ್ಥದಲ್ಲಿ ಎಲ್ಲರೂ ಅವರವರ ಸಮಯದಲ್ಲಿ ಮಾಡುವ, ಜವಾಬ್ದಾರಿ ಹಂಚಿಕೊಳ್ಳುವ ರೀತಿ ಕೆಲಸ ನಡೆಯುವಂತಿತ್ತು. ಸ್ಕೂಲಿನಿಂದ ಬರುವ ಮಗುವಿನ ಕ್ರಶ್ ಸೌಲಭ್ಯ ಇಲ್ಲವಾದಾಗಲೋ ಅಥವಾ ಮಗುವಿನ ತಾಯಿಯೋರ್ವಳಿಗೆ ಕೆಲಸದಲ್ಲಿ ಬೇರೆ ಏನೋ ಮಾರ್ಪಾಟಾದಾಗಲೋ ಆಗೊಮ್ಮೆ ಈಗೊಮ್ಮೆ ನಮ್ಮ ಆಫೀಸಿನ ಸಂಖ್ಯೆ ಹೆಚ್ಚಾಗುತ್ತಿತ್ತು. ಫಲಿತಾಂಶ ಒಳ್ಳೆದೇ ಆಗಿತ್ತು. ದಂಪತಿಗಳ ಮಧ್ಯದ ಲಿಂಗಾಧಾರಿತ ಪಾತ್ರಗಳಿಂದ ಬಿಡುಗಡೆಗೊಳಿಸುವತ್ತ ನಾನು ಸ್ವಲ್ಪ ಕೊಡುಗೆ ಸಲ್ಲಿಸುತ್ತಿದ್ದೇನೆಂಬ ಭಾವನೆ ನನ್ನದಾಗಿತ್ತು. ಒಂದು ಭಾನುವಾರ ಸ್ಟೆನೋ ಟೈಪಿಸ್ಟ್ ಒಬ್ಬರು ತುರ್ತಾದ ಕೆಲಸಕ್ಕಾಗಿ ಬರಬೇಕಾಗಿತ್ತು. ಆ ದಿನ ಕ್ರಶ್ ಇರಲಿಲ್ಲವಾದ್ದರಿಂದ ಮಗುವನ್ನು ಬಿಡಲು ಬೇರೆ ಯಾವುದೇ ವ್ಯವಸ್ಥೆ ಇರದಿದ್ದರಿಂದ ತನಗೆ ಬರುವುದಕ್ಕೆ ಸಾಧ್ಯವಿಲ್ಲ ಎಂದು ಆಕೆ ವಿರೋಧಿಸಿದಳು. ಮಗುವನ್ನು ಕರೆದು ತಾ ಎಂದೆ. ಅವಳು ದ್ವಂದದಲ್ಲಿಯೇ ಬಂದಳು. 'ಮಗು ಯಾರೊಡನೆಯೂ ಹೋಗುವುದಿಲ್ಲ' ಆಕೆ ವಿವರಿಸಿದಳು. ಆಕೆಯ ಕೆಲಸಕ್ಕೆ ತೊಡಗಿಕೊಳ್ಳುವಂತೆ ನಾನು ಒತ್ತಾಯಿಸಿದೆ. ಆಕೆಯ ಇಬ್ಬರು ಪುರುಷ ಉದ್ಯೋಗಿಗಳು ಹಾಗೂ ನಾನು ಯಾರೊಡನೆಯೂ ಬೆರೆಯದ ಆ ಮಗುವನ್ನು ಎರೆಡು ಘಂಟೆಗಳ ಕಾಲ ಸಂತೈಸಿ ಮನೋರಂಜನೆ ನೀಡಿದೆವು, ಆ ಮಗು ಪಿಸುಗುಟ್ಟಲಿಲ್ಲ ಕೂಡಾ.



ಬರಿಯ 'ವೈಯಕ್ತಿಕ ಕೆಲಸಕ್ಕಾಗಿ' ಮಾತ್ರ ನಾವು ನಮ್ಮ ಬದುಕಿನ ಜಂಜಡದಿಂದ ಬಿಡಿಸಿಕೊಳ್ಳುವುದಲ್ಲ, ನಮಗಾಗಿ ಕೂಡಾ ಹೀಗೆ ಮಾಡಬೇಕಾಗುತ್ತದೆ. ಇದು ಮಹಿಳೆಯರಿಗೆ ಹಾಗೂ ಪುರುಷರಿಗೆ ಇಬ್ಬರಿಗೂ ಅನ್ವಯವಾಗುತ್ತದೆ. ಕೆಲಸದ ಒತ್ತಡ ಬಹಳ ಜನ ಪುರುಷರಿಗೆ ಬೇಗ ಸಾವನ್ನು ತಂದೊಡ್ಡುತ್ತದೆ ಎಂಬುದು ಸರ್ವವಿಧಿತವಾಗಿರುವ ವಿಚಾರ. ಇದು ಹೆಚ್ಚಾಗಿ ಪುರುಷರಿಗೆ ಅನ್ವಯಿಸುತ್ತದೆ ಏಕೆಂದರೆ ಪುರುಷರು ಹೆಚ್ಚಾಗಿ ಅವರ 'ಕೆಲಸದ ಅಸ್ತಿತ್ವದಲ್ಲಿ' ಸಿಕ್ಕಿಕೊಂಡು ಬಿಟ್ಟಿರುತ್ತಾರೆ. ಮನೆಯ ದುಡಿಯುವ ಯಜಮಾನನ ಪಾತ್ರದಲ್ಲಿರುವ ಇವರು ಮಾನಸಿಕವಾಗಿಯೂ ಕೂಡಾ ಇದಕ್ಕೆ ಅಂಟಿಕೊಂಡಿರುತ್ತಾರೆ. (ಮೆಕೆನ್ನಾರ ಪದಗಳು). ಹಣ ನೀಡುವ ಮೂಲಕ ಪರೋಕ್ಷವಾಗಿ ಪ್ರೀತಿಸುವ, ಹಾಗೂ ಕಾಳಜಿ ತೋರಿಸುವುದಷ್ಟೇ ಇವರಿಗೆ ಗೊತ್ತಿರುತ್ತದೆ ಅಷ್ಟೇ. ಪುರುಷರೂ ಸಹ ಹೀಗೆ ವ್ಯಾಖ್ಯಾನಿಸಲ್ಪಟ್ಟ ತಮ್ಮ ಪಾತ್ರದಿಂದ ಬಿಡುಗಡೆಹೊಂದಿ ಪರಿಪೂರ್ಣವಾಗಿ ಮನುಷ್ಯನಾಗಿ ಸಂತೋಷ ಹೊಂದುವುದನ್ನು ಕಲಿಯಬೇಕಾಗಿದೆ. ತಮ್ಮ ಸುತ್ತಲಿನವರೊಂದಿಗೆ ಹಾಗೂ ತಮ್ಮ ಮಟ್ಟಿಗೆ ಕೂಡಾ ಆತ್ಮೀಯವಾಗಿ ಬೆರೆಯುವುದನ್ನು ಕಲಿಯಬೇಕಾಗಿದೆ.

ಹೆಂಗಸರ ವಿಚಾರದಲ್ಲಿ ಇದು ವೈರುಧ್ಯ ಉಳ್ಳ ವಿಚಾರವಾಗಿದೆ. ಮಹಿಳೆಯರು ಪೂರ್ಣ ಮನುಷ್ಯತ್ವವನ್ನು ಅರಿಯುವುದ-ಕ್ಕೋಸ್ಕರ ವೇ 'ಕೆಲಸ'ದ ಆಯ್ಕೆ ಮಾಡಬೇಕಾಗಿದೆ. ಈ 'ಕೆಲಸ'ದಲ್ಲಿ ತೊಡಗಿಸಿ ಕೊಳ್ಳುವುದಕ್ಕೋಸ್ಕರವೇ ನಮ್ಮನ್ನು ನಾವು ಹೆಚ್ಚು ಹೆಚ್ಚು ಪ್ರಶ್ನಿಸಿಕೊಂಡು ಸಾಗಬೇಕಾಗುತ್ತದೆ. ಮುಂದೆ ಸಾಗಲು ಇರುವ ದಾರಿಯ ಬಗ್ಗೆ ಮೆಕೆನ್ನಾ ಅಮೇರಿಕಾದ ನವ ಜನಾಂಗ ಅಪ್ಪಿಕೊಂಡ ಹೊಸ ಭರವಸೆಯ ಬಗ್ಗೆ ಹೇಳುತ್ತಾರೆ. ನಮ್ಮ ಅವಶ್ಯಕತೆಗಳಿಗೆ ಅನುಗುಣವಾಗಿರುವ ಬೇಡಿಕೆಗಳನ್ನಿಡುತ್ತಾ ನಾವು ನಮ್ಮ ನೈಪುಣ್ಯತೆ ನೀಡಬೇಕಾಗಿದೆ. ನಮ್ಮ 'ಕೆಲಸ' ದ ಸ್ಥಳದಲ್ಲಿ ನಮ್ಮ ಭರವಸೆ, ಅಂತಃಸತ್ವ ಬೆಳಸಿಕೊಂಡರೆ, ನಮ್ಮ ಬೇಡಿಕೆಯ ನೈಪುಣ್ಯತೆ, ವಿನಿಮಯದ ನೈಪುಣ್ಯತೆ ಬೆಳೆಯುತ್ತದೆ. ನಮ್ಮ ಕೆಲಸಕ್ಕನುಗುಣವಾಗಿ ನಮ್ಮನ್ನು ನಾವು ಬದಲಾಯಿಸಿಕೊಳ್ಳಲೂ ಕೂಡಾ ಸಾಧ್ಯವಾಗುತ್ತದೆ. ದುಡಿಯುವ ಪುರುಷರೂ ಇದನ್ನು ನಮ್ಮಿಂದ ಕಲಿಯುತ್ತಾರೆ. ಇದು ಮಹಿಳಾ ಚಳುವಳಿಯ ಮುಂದಿನ ಹಂತವಾಗಬೇಕಾಗಿದೆ. ಕೆಲಸ ಹಾಗೂ ಕುಟುಂಬದ ರಚನೆಯಲ್ಲಿ ಸಂಪೂರ್ಣ ಬದಲಾವಣೆ ಬರಬೇಕಾಗಿದೆ. ಒಬ್ಬರು ಹಾಗೆಯೇ ಇರುವಾಗ ಇನ್ನೊಬ್ಬರು ಬದಲಾವಣೆ ಆಗಲಾರರು. ಮಹಿಳೆಯರು ಕೆಲಸದ ನೈಪುಣ್ಯತೆ, ಪ್ರತಿಭೆ, ಕಲಿತು ದುಡಿಯುವ ಪಾತ್ರ ವಹಿಸಿದ ಹಾಗೆ ಪುರುಷರು ಭಾವನಾತ್ಮಕ ಪಾತ್ರ ವಹಿಸುವುದನ್ನು ಮತ್ತು ಆದರಿಂದ ತೃಪ್ತಿ ಕಾಣುವುದನ್ನು ಕಲಿಯಬೇಕಾಗಿದೆ. ಆಗ ಮಾತ್ರ ಕ್ರಾಂತಿಕಾರಕ ಬದಲಾವಣೆ ಕಾಣಲು ಸಾಧ್ಯವಾಗುತ್ತದೆ.

ರಾಧ

ಕನ್ನಡಕ್ಕೆ : ಹೆಚ್.ಎಸ್. ರಾಜೇಶ್ವರಿ,
ಹೆಚ್.ಎಸ್.ಚಂಪಾವತಿ

# "ಸಖಿಯರ ಗ್ಯಾರೇಜ್"

ಹೆಣ್ಣು ಮಕ್ಕಳಿಗೆ ಉದ್ಯೋಗ ಕಲ್ಪಿಸುವ ನಿಟ್ಟಿನಲ್ಲಿ 'ವಿಮೋಚನ ಮಹಿಳಾ ಸಂಸ್ಥೆಯವರು' ಭಿನ್ನವಾಗಿ ಯೋಚಿಸಿದ್ದರ ಫಲವಾಗಿ ರೂಪುಗೊಂಡದ್ದು 'ಸಖಿ ಮೋಟಾರ್ಸ್'. ಹೆಣ್ಣು ಮಕ್ಕಳೆ ನಡೆಸುವ ಈ ಗ್ಯಾರೇಜ್‌ನ ಹಿಂದೆ ವಿಮೋಚನ ದ ಶಕ್ಕುನ್ ನಾಗೂ ಡೊನಾ ರವರ ಪರಿಶ್ರಮ ಕೆಲಸ ಮಾಡಿದೆ. ಈ ಪರಿಶ್ರಮದೊಂದಿಗೆ ಕಮಲ, ಪುಷ್ಪಾ, ಸಂಪಂಗಿ, ಗೌರಿಯವರ ಕಲಿಯಲೇ ಬೇಕೆಂಬ ಶ್ರದ್ಧೆ, ಛಲವಿಲ್ಲದಿದ್ದರೆ ಸಖಿ ಮೋಟರ್ಸ್ ಜೀವ ಪಡೆಯುತ್ತಿರಲಿಲ್ಲ, ಈ ಹೆಣ್ಣು ಮಕ್ಕಳು ನಗರದ ಇಂಗ್ಲೀಷ್ ಶಾಲೆ ಕಲಿತವರಲ್ಲ. ಗದಗ ಜಿಲ್ಲೆಯ ಗಜೇಂದ್ರಗಡದ ಕಮಲ P.U.C ವರೆಗೆ ಓದಿದ್ದಾಳೆ. ತಮಿಳುನಾಡಿನ ತೂತುಕುಡಿಯ ಪುಷ್ಪಾ S.S.L.C ವರೆಗೆ ಓದಿದ್ದಾಳೆ. ಬೆಂಗಳೂರು ಜಿಲ್ಲೆ ಶ್ಯಾನಭೋಗರ ಹಳ್ಳಿಯ ಸಂಪಂಗಿ. 8ನೇ ಕ್ಲಾಸಿನವರೆಗೆ ಕಲಿತಿದ್ದರೆ, ಬಳ್ಳಾರಿಯ ನರಸಾಪುರದ ಗೌರಿ ಶಾಲೆಗೆ ಹೋಗೆ ಇಲ್ಲ. ತರಭೇತಿಯ ಹಂತದಲ್ಲಿ ಇವರೊಟ್ಟಿಗೆ ಇದ್ದವರು ಸಾದಳ್ಳಿಯ ಮೀನಾ, ಲಲಿತ, ದೆಹಲಿಯ ಸಂಜೀವಿನಿ, ದೇವರ ಚಿಕ್ಕನ ಹಳ್ಳಿಯ ಅಂಥೋಣಿ ಮೇರಿ, ಗುಲ್ಬರ್ಗದ ಜ್ಯೋತಿ. ಮೀನಾ, ಲಲಿತ, ಮೇರಿ ಶಾಲೆಗೆ ಹೋದವರಲ್ಲ. ಜ್ಯೋತಿ S.S.L.C. ವರೆಗೆ ಕಲಿತ್ತಿದ್ದಾಳೆ, ಸಂಜೀವಿನಿಯೊಬ್ಬಳೆ ಪದವೀಧರೆ. ಗ್ಯಾರೇಜ್ ಪ್ರಾರಂಭಿಸಿ ಇಲ್ಲಿ ವರೆಗೆ ಉಳಿದಕೊಂಡವರು ನಾಲ್ವರು ಮಾತ್ರ. ತರಬೇತಿ ಮುಗಿಸಿದ ಮೇಲೆ ಅನುಭವ ಪಡೆಯಲು, ಕಮಲ ಮೇಘ್‌ದೂತ್ ಮೋಟಾರ್ಸ್‌ನಲ್ಲಿ 2 1/2 ವರ್ಷ, ಅಧ್ವೈತ್ ಮೋಟಾರ್ಸ್‌ನಲ್ಲಿ ಗೌರಿ 4 ವರ್ಷ, ಸಂಪಂಗಿ 3 ವರ್ಷ, ಬಜಾಜ್ ಮೋಟಾರ್ಸ್‌ನಲ್ಲಿ ಪುಷ್ಪಾ 2 ವರ್ಷ ಕೆಲಸ ಮಾಡಿದ್ದಾರೆ. ಅನುಭವದಿಂದ ಪಡೆದುಕೊಂಡ ಆತ್ಮವಿಶ್ವಾಸ, ಧೈರ್ಯ, ಶ್ರದ್ಧೆಯಿಂದ ಕಲಿತ ಕಸುಬು - ಇವೆ ಸಖಿ ಮೋಟಾರ್ಸ್‌ನ ಬಂಡವಾಳವಾಯ್ತು. ಕಳೆದ ವರ್ಷ ಏಪ್ರಿಲ್ 2 ರಂದು ಯುಗಾದಿ ಹಬ್ಬದಂದು ಬೆಂಗಳೂರಿನ ಆಸ್ಟಿನ್ ಟೌನ್‌ನಲ್ಲಿ ಸಖೀ ಮೋಟಾರ್ಸ್ ಪ್ರಾರಂಭವಾಯಿತು. ಹೆಣ್ಣು ಮಕ್ಕಳೇ ನಡೆಸುವ ಗ್ಯಾರೇಜ್ ಎಂಬ ಕಾರಣಕ್ಕೆ, ಹಿಡಿದ ಹಾದಿ ಸುಗುವವಾಗೇನೂ ಸಾಗುತ್ತಿಲ್ಲ. ಯಶಸ್ವಿಯಾಗುತ್ತೇವೆಂಬ ಭರವಸೆಯಷ್ಟೇ ಅವರನ್ನು ಮುನ್ನಡೆಸುತ್ತಿದೆ. ಆ ಅನುಭವ ಕುರಿತು ಸಖೀ ಮೋಟಾರ್ಸ್‌ನ ಕಮಲ ಅವರು ಬರೆದಿರುವ ಲೇಖನವನ್ನು ಮಾನಸ ಓದುಗರಿಗೆಂದು ಪ್ರಕಟಿಸಿದ್ದೇವೆ.

ನಮ್ಮ ಸಮಾಜ ಪುರುಷ ಪ್ರಧಾನ ಸಮಾಜವಾಗಿದೆ. ವಿಜ್ಞಾನ ಎಷ್ಟೇ ಮುಂದುವರೆದರು, ಸಮಾಜ ಎಷ್ಟೆ ಮುಂದುವರೆದರು ಮಹಿಳೆಯರ ಮೇಲಿನ ದೌರ್ಜನ್ಯ ನಿಲ್ಲುತ್ತಲೆ ಇಲ್ಲ. ಪುರುಷ ಪ್ರಧಾನ ಸಮಾಜ ಅಷ್ಟೊಂದು ಹೆಮ್ಮರವಾಗಿ ಬೆಳೆದು ನಿಂತಿದೆ ಕಳೆದ 25 ವರ್ಷಗಳಿಂದ ವಿಮೋಚನ ಸಂಸ್ಥೆ ಮಹಿಳೆಯರ ಹಕ್ಕಿಗೊಸ್ಕರ ಕೆಲಸ ಮಾಡುತ್ತಿದೆ. ಅದೆಷ್ಟೊ ಮಹಿಳೆಯರಿಗೆ ಉದ್ಯೋಗ ಅವಕಾಶಗಳನ್ನು ನೀಡಿದೆ. ಹೆಚ್ಚಾಗಿ ಮಹಿಳೆಯರಿಗೆ ಮನೆಗೆಲಸದ ತರಹದ ಕೆಲಸಗಳನ್ನು ಕೊಡಿಸುವುದು. ಇದೆಲ್ಲ ಮನಗಂಡ ವಿಮೋಚನ ಸಂಸ್ಥೆಗೆ ಮಹಿಳೆಯರು ಸ್ವಾವಲಂಭಿ ಜೀವನ ನಡೆಸ ಬೇಕು ಎಂಬ ಆಸೆ. ಅದಕೊಸ್ಕರ ವಿಮೋಚನ ಸಂಸ್ಥೆ ಹೊಸ ಪ್ರಯತ್ನಕ್ಕೆ ಹೊಸದಾರಿಯನ್ನು ಹಿಡಿದರು. ಮದುರೈನಲ್ಲಿ ಇರುವ Loyala Instituteನಲ್ಲಿ I.T.Iನಲ್ಲಿ ಟ್ಟು ವಿಲರ್ಸ್ ತರಬೇತಿಯನ್ನು ನೀಡುತ್ತಿರುವುದನ್ನು ಪತ್ತೆ ಹಚ್ಚಿ ಬೆಂಗಳೂರಿನಿಂದ ಇಬ್ಬರು ಹುಡುಗಿಯರನ್ನು ತಯಾರು ಮಾಡಿ ಅವರನ್ನು ಮದುರೈಗೆ ಕರೆದು ಕೊಂಡು ಹೋಗಿ ಅವರಿಗೆ ತರಬೇತಿ ಪಡೆಯಲು ಅವಕಾಶ ಮಾಡಿ ಕೊಟ್ಟರು. ಅವರಲ್ಲಿ ಕೂಡಾ ತುಂಬಾ ಉತ್ಸಾಹ ಸಂತೋಷ ಇತ್ತು. ಯಾಕೆ ಎಂದರೆ ಈ ಕೆಲಸ ಯಾವ ಮಹಿಳೆಯರು ಮಾಡುತ್ತಿಲ್ಲ ಆದರೆ ನಾವು ಮಾಡುತ್ತಿದ್ದೆವೆ ಎನ್ನುವ ಸಂತೋಷ ಅವರ ಮನ ತುಂಬಿತು.

ಆ ಹುಡಿಗಿಯರು ಕೂಡಾ ತುಂಬಾ ಚೆನ್ನಾಗಿ ಟ್ರೇನಿಂಗ ಮುಗಿಸಿ ಬೆಂಗಳೂರಿಗೆ ಬಂದರು. ವಿಮೋಚನ ಸಂಸ್ಥೆ ಈ ಹುಡಿಗಿಯರನ್ನು ಸುಮ್ಮನೆ ಬಿಡದೆ ಇನ್ನೊಂದು ಯೋಜನೆಯನ್ನು ಹಾಕಿತು. ಕರ್ನಾಟಕದಲ್ಲಿ ಈ ತರಬೇತಿ ಇಲ್ಲ ಈ ಹುಡಿಗಿಯರಿಂದ ಆ ತರಬೇತಿಯನ್ನು ಪ್ರಾರಂಭಿಸಬೇಕು ಎಂದುಕೊಂಡು ಬನ್ನೆರುಘಟ್ಟ ರೋಡಿನಲ್ಲಿ ಇರುವ Loyala Institute Principal ಜೊತೆಯಲ್ಲಿ ತರಬೇತಿಯ ಬಗ್ಗೆ ಮಾತನಾಡಿದರು. ಹುಡಿಗಿಯರನ್ನು ಹೇಗೆ ಸೇರಿಸುವುದು ಎಂದು ಯೋಚನೆ ಮಾಡಿ ಪೇಪರಿನಲ್ಲಿ ಉಚಿತ ತರಬೇತಿ ಎಂದು ಜಾಹಿರಾತು ಕೊಟ್ಟರು. ತುಂಬಾ ಕಷ್ಟ ಪಟ್ಟು 10 ಜನ ಹುಡಿಗಿಯರನ್ನು ಸೇರಿಸಿ ಅವರಿಗೆ ತರಬೇತಿಯ ಬಗ್ಗೆ ತಿಳಿಸಿ ತಡ ಮಾಡದೆ ತರಬೇತಿಯನ್ನು ಪ್ರಾರಂಬಿಸಿಯೇ ಬಿಟ್ಟರು. ಇವರಿಗೆ ಇನ್ನೂ ಸ್ವಲ್ಪ ಅನುಕೂಲವಾಗಲಿ ಎಂದು ಎಲ್ಲರಿಗೂ ಸ್ಟೈಪೆಂಡ ಬರುವ ಹಾಗೆ ಮಾಡಿದರು. ಹೀಗೆ ಅವರ ಒಂದೊಂದು ಕಷ್ಟದ ಫಲದಿಂದ ನಮ್ಮ ಓದಿಗೆ ಅನೂಕೂಲವಾಯಿತು. ಕಾರ್ಬೆಟರ್ ಕ್ಲಿನಿಂಗು, ಏರ್ ಫಿಲ್ಟರ್ ಕ್ಲಿನಿಂಗು, ಕ್ಲಚ್ಚು ಟ್ರಿಟಿಂಗು, ವೆರೆಟರ್ ಗ್ರಿಸಿಂಗ್, ಪ್ಲಗ್ ಕ್ಲಿನಿಂಗು, ಸ್ಪೆರ್ ಪಾರ್ಟು ರಿಪ್ಲೆಸಿಂಗು, ಪೋರ್ಕ್ ಒರಾಲಿಂಗ್ ಎಲ್ಲ ಕಲ್ತಿದೀವಿ. ನಮ್ಮ ತರಬೇತಿ ಮುಗಿಯುತ್ತಿದ್ದ ಹಾಗೆ ಮೆಡಂಗೆ ಇನ್ನೂ ಜವಬ್ದಾರಿ ಹೆಚ್ಚಾಯಿತು. ಹುಡಿಗಿಯರು

ಹಾಸ್ಟೆಲಲ್ಲಿ ಇರುವುದು ಬೇಡ ಇವರು ಸ್ವತಂತ್ರವಾಗಿ ಇರಬೇಕು ಎಂದು ಮನೆ ಹುಡುಕಲು ಪ್ರಾರಂಬಿಸಿದರು. ಕೊನೆಗೆ ಇಂದಿರಾನಗರದಲ್ಲಿ ಮನೆ ಸಿಕ್ಕಿತು. ಅಲ್ಲಿ ನಮ್ಮಗೆಲ್ಲ ವಸತಿಯನ್ನು ಮಾಡಿ ಕೊಟ್ಟರು. ಅದೆಲ್ಲಾ ಆದಮೇಲೆ ಇನ್ನೂ ಸ್ವಲ್ಪ ಪ್ರಾಟೀಸ್ ಆಗಬೇಕು ಎಂದು ಎಲ್ಲ ಹುಡಿಗಿಯರು ಹೇಳಿದರು. ಒಬ್ಬ

ಒಬ್ಬಬ್ಬರನ್ನು ಒಂದೊಂದು ಕಂಪನಿಯಲ್ಲಿ ಸೇರಿಸಿದರು. ಮಾರನೆಯ ದಿನದಿಂದಲೆ ನಾವು ಕೆಲಸಕ್ಕೆ ಹೋದೆವು. ಬೆಳ್ಳಿಗೆ ಬೇಗ ಎದ್ದು ಮನೆ ಕೆಲಸ ಮುಗಿಸಿ ಎಲ್ಲರಿಗಿಂತ ಮುಂಚೆಯ ಬಂದು ಕಂಪನಿ ಸೇರುತ್ತಿದ್ದೆವು. ಮ್ಯಾಕ್ಯಾನಿಕ್ ಒಂದು ಸಾರಿ ಹೇಳಿದ ಕೆಲಸವನ್ನು ಇನ್ನೊಂದು ಸಾರಿ ಹೇಳಿಸಿಕೊಳ್ಳದೆ ಬೇಗ ಬೇಗನೆ ಕಲಿಯುತ್ತಿದ್ದೇವು. ಒಂದು ವೇಳೆ ತಪ್ಪು ಮಾಡಿದರೆ ನೀವು



ನಾವು 8 ಜನ ಹುಡಿಗಿಯರು ಇದ್ದೆವು. ಮೇಡಂ ಜೊತೆ ಒಂದೊಂದು ಕಂಪನಿಗೆ ಇಂಟರಿವುಗೆ ಬಂದೆವು. ಆದರೆ ಅಲ್ಲಿ ನಡೆದ ಸನ್ನಿವೇಷ ನೆನೆಸಿ ಕೊಂಡರೆ ತುಂಬಾ ಬೇಜಾರು. ನಾವು ಅವರಿಗೆ ಹೇಳಿದೆವು. " ITI ತರಬೇತಿ ಪಡೆದಿದ್ದೇವೆ ಹೆಚ್ಚಿನ ಪ್ರಾಕ್ಟೀಸಿಗೊಸ್ಕರ ನಾವು ಕಂಪನಿಯಲ್ಲಿ ಕೆಲಸ ಮಾಡುತ್ತೆವೆ ಸಾರ್'' ಅಂಥಾ ಹೇಳಿದರೆ ಏನಮ್ಮ ನೀವು ಈ ಕೆಲಸ ಮಾಡುತ್ತಿರಾ ? ಗಂಡಸರ ಕೈಯಲ್ಲಿ ಈ ಕೆಲಸ ಮಾಡೊದೆ ಕಷ್ಟ ಆಗುತ್ತೆ ನಿಮ್ಮ ಕೈಯಲ್ಲಿ ಆಗುತ್ತಾ ಅಂಥ ಕೇಳುತ್ತಿದ್ದರು. ಒಂದೊಂದು ಕಂಪನಿಯಲ್ಲಿ ಕೆಲಸಾನೆ ಇಲ್ಲ ಅನ್ನುತ್ತಿದ್ದರು. ಆದಕ್ಕೆ ನಾವು ಹೇಳಿದೆವು ಒಂದು ತಿಂಗಳೂ ನಮ್ಮ ಕೆಲಸ ನೋಡಿ ನಾವು ಕೆಲಸ ಮಾಡಿದರೆ ಸೇರಿಸಿಕೊಳ್ಳಿ ಇಲ್ಲ ಅಂದರೆ ಬೇಡ ಅಂಥಾ ಹೇಳಿದಮೇಲೆ ಬೇಡದ ಮನಸ್ಸಿನಿಂದ ಒಪ್ಪಿಕೊಂಡರು.

ಮನೆಯಲ್ಲಿ ಅಡಿಗೆ ಮಾಡಲಿಕ್ಕೆ ಲಾಯಕ್ ಅಂಥಾ ಬೈಯುವುದು ಮತ್ತೆ ಗಾಡಿ ಸರಿಯಾಗಿ ಹಿಡಿಯೊಕೆ ಬರಲ್ಲ ಇಲ್ಲಿ ಯಾಕೆ ಬರುತ್ತಿರಿ ಮನೆಯಲ್ಲಿ ಸ್ಪೂನ್ ಹಿಡಿಯಿರಿ ಎಂದು ಚುಚ್ಚು ಮಾತಾಡಿ ಎಲ್ಲರೂ ಸೇರಿ ನಗುತಿದ್ದರು. ನಮಗೆ ತುಂಬಾ ಬೇಜಾರು ಆಗಿ ಅಳುತ್ತ ಮನೆಗೆ ಬಂದು ಮಿಸ್ ನಾವು ಕೆಲಸಕ್ಕೆ ಹೋಗುವುದಿಲ್ಲ ಅಂಥಾ ಹೇಳಿದ್ದಾಗ ಮಿಸ್ಸ್ ನಮಗೆ ಬುದ್ದಿ ಹೇಳಿ 'ಅವರು ನಗಿದರೆ ನಗಲಿ ಬಿಡಮ್ಮ ನೀವು ಯಾಕೆ ಅವರನ್ನು ನೋಡುತ್ತಿರಾ ಸುಮ್ಮನೆ ಇರಿ ಅವರು ಬೈದರೆ ಬೈಯಲ್ಲಿ ನೀವು ಏನು ಮಾತನಾಡಬೇಡಿ ಅವರೆ ಸುಮ್ಮನಾಗುತ್ತಾರೆ ನೀವು ಮೊದಲು ಚೆನ್ನಾಗಿ ಕೆಲಸ ಕಲಿತು ತೋರಿಸಿ ಅವರ ಬಾಯಿ ಮುಚ್ಚಿಸ ಬೇಕು ಎಂದು ಮಿಸ್ಸ್ ಹೇಳಿದಾಗ ನಮ್ಮಲ್ಲಿ ಏನೊ ಒಂದು ದೈರ್ಯ ಬಂದು ಬೇಗ ಬೇಗ

ಕೆಲಸವನ್ನು ಕಲಿತೇವು ನಾವು ಮೊದಲು ನೆಲದ ಮೇಲೆ ಗಾಡಿಯನ್ನು ಮಾಡುತ್ತಿದ್ದೆವು. ನಾವು ಚೆನ್ನಾಗಿ ಕೆಲಸ ಮಾಡುವುದನ್ನು ನೋಡಿದ ಮ್ಯಾನೆಜರ್ ನೀವು ರ‍್ಯಾಪ ಮೇಲೆ ಕೆಲಸ ಮಾಡಿ ಮತ್ತೆ ಒಬ್ಬಳೆ ಮಾಡಿ ಯಾರ ಜೋತೆ ಸೇರ ಬೇಡಿ ಎಂದರು. ಅವರ ಮಾತು ಕೇಳಿ ನಮಗೆ ಇನ್ನೂ ನಾವು ಚೆನ್ನಾಗಿ ಮಾಡಬೇಕು ಎಂದು ಮನಸ್ಸಲ್ಲಿ ಹುಟ್ಟಿತು. ನಾವು ಜಾಸ್ತಿ ಕೆಲಸ



ಮಾಡುವ ಆಸಕ್ತಿ ಬಂದಿತು. ಮ್ಯಾಕ್ಯಾನಿಕ್ ಅವರು 10 ಗಾಡಿ ಇಳಿಸಿದರೆ ನಾವು ಕೂಡ ಅವರಿಗೆ ಸಮನಾಗಿ ಗಾಡಿ ಇಳಿಸಿದೇವು ಇನ್ನೊಂದು ಮುಖ್ಯವಾದ ವಿಷಯವೆಂದರೆ ಹುಡಿಗಿಯರು ಕೂಡಾ ಚೆನ್ನಾಗಿ ಕೆಲಸ ಮಾಡುತ್ತಾರೆ ನಾವು ಅವರನ್ನು ಗೇಲಿಮಾಡ ಬಾರದು ಎಂದು ಅವರಿಗೆ ತಿಳಿಯಿತು. ಒಂದು ವೇಳೆ ಹೆದ್ದು ಮಿೂರಿ ನಮ್ಮ ಜೊತೆ ಜಗಳಕ್ಕೆ ಬಂದರೆ ಸುಮ್ಮನೆ ಇರದೇ ನಾವು ಕೂಡ ಜಗಳಮಾಡಲು ಪ್ರಾರಂಭಿಸಿದ ಮೇಲೆ ಅವರು ನಮ್ಮ ಜೊತೆಯಲ್ಲಿ ಒಳ್ಳೆಯ ಬಾಂದವ್ಯ ಬೆಳೆಸಿದರು. ಎಷ್ಟೋ ಸಾರಿ ಸೂಪರವೈಸರ್ ನೀವು ಇಲ್ಲಿ ಕೆಲಸ ಮಾಡಿಯಮ್ಮ ಅನ್ನುತ್ತಿದ್ದರು ಹೀಗೆ 3.4 ವರ್ಷ ಕೆಲಸ ಮಾಡಿದೆವು. ಇಷ್ಟಕ್ಕೆ ಸುಮ್ಮನಿರದ ವಿಮೋಚನ ಸಂಸ್ಥೆ ಹುಡಿಗಿಯರು ಸ್ವಾವಲಂಬಿಯಾಗಿರಬೇಕು,ಹೊಸ ಜಗತ್ತಿಗೆ ಕಾಲು ಇಡಬೇಕು ಎಂದು ಮೇಡಂ ತುಂಬಾ ಕಷ್ಟಾಪಟ್ಟು ಎಲ್ಲಾ ಕಡೆ ಡೋನೆಷನ್ ಕೇಳಿ ಮತ್ತೆ ಒಂದೊಂದು ಕಡೆ ಪರನಿರ್ಷರ ಕೇಳಿ ಇನ್ನೊಂದು ಕಡೆ ಟೂಲ್ಸ ಕೇಳಿ ಹೀಗೆ ತುಂಬಾನೆ ಕಷ್ಟ ಪಟ್ಟು ಎಲ್ಲಾ ಅರೆಂಜ್ ಮಾಡಿದರು. ಆಡಿದ ಮಾತನ್ನು ಮಾಡಿ ತೋರಿಸುವುದೆ ಮೇಡಂ ಉದ್ದೇಶ. ಅವರು ಎಷ್ಟೋ ಆಸೆ ಮತ್ತು ಉದ್ದೇಶಗಳನ್ನು ಇಟ್ಟುಕೊಂಡು ನಾವು ಗ್ಯಾರೆಜ ಮಾಡಲೇಬೇಕು ಎಂದು ಹಠ ಹಿಡಿದು ಸಖೀ ಮೋಟರ್ಸ್ ಶುರು ಮಾಡಿದರು.

2.4.03 ರಂದು ಯುಗಾಧಿಯ ದಿನ. ನಮ್ಮ ಅಂಗಡಿ ಶುರುವಾಯಿತು. ಬೇವು ಬೆಲ್ಲದ ಸವಿಯ ಜೊತೆ ಹಳೆಯದೆಲ್ಲ ಮರೆತು, ರಂಗು ರಂಗಿನ ಕನಸೂಗಳೊಂದಿಗೆ ಹಬ್ಬದ ಸಡಗರದಲ್ಲಿ ಮಿನುಗುವ ದೀಪ ಬೆಳಕಿನಲ್ಲಿ ಹೊಸ ಜೀವನಕ್ಕೆ ಕಾಲು ಇಡುವ ಹಾಗೆ ಈ ಸಖಿ ಮೊಟರ್ಸ್ ಸ್ಥಾಪನೆ ಆಯಿತು. ಆ ದಿನದಂದು ನಮಗೆಲ್ಲ ಸಂತೋಷಕ್ಕೆ ಪರಿವೆ ಇಲ್ಲ. ಒಂದು ಕ್ಷಣ ನಮ್ಮನೆ ನಾವು ಮರೆತೆವು. ಈ ಸಂತೋಷದಲ್ಲಿ ತುಂಬಾ ಚೆನ್ನಾಗಿ ಕೆಲಸ ಮಾಡಿದರು ಕೂಡಾ ಇಲ್ಲಿಯೂ ಒಬ್ಬ ಪುರುಷನ ಪಾತ್ರ ಪ್ರಮುಖವಾಗಿದೆ. ನಾವು ಇಲ್ಲಿ ಎಷ್ಟೆ ಕಷ್ಟ ಪಟ್ಟರು ನಮ್ಮ ಶಕ್ತಿ ಕುಗ್ಗುತಿದೆ. ಯಾಕೆ ಎಂದರೆ ಇಲ್ಲಿ ಬರುವ ಪ್ರತಿಯೊಬ್ಬ ಪುರುಷರು (ಕಸ್ಟಮರ) ಮ್ಯಾಕ್ಯಾನೀಕ್ (ಹುಡುಗ) ನ ಮುಖ ಕಾಣದಿದ್ದರೆ ಅವರು ಬೇರೆ ಕಡೆ ತಮ್ಮ ಗಾಡಿಯನ್ನು ತೆಗೆದು ಕೊಂಡು ಹೋಗುತ್ತಾರೆ ಇದಕ್ಕೆ ಕಾರಣ ಬೇರೆ ಏನು ಇಲ್ಲ ''ನಾನು ಗಂಡಸ್ಸು ನನ್ನ ಗಾಡಿಯನ್ನು ಈ ಹೆಂಗಸರ ಕೈಯಲ್ಲಿ ಬಿಡಬೇಕು'' ಎಂದು. ಅವನಿಗೆ ಚೆನ್ನಾಗಿ ಗೊತ್ತು ಹೆಣ್ಣುಮಕ್ಕಳು ಚೆನ್ನಾಗಿ ಕೆಲಸ ಮಾಡುತ್ತಾರೆ ಎಂದು ತಿಳಿದರು ಕೂಡ ಗಾಡಿ ಬಿಡುವದಿಲ್ಲ. ಹೆಣ್ಣು ಮಕ್ಕಳು ಎಷ್ಟೆ ಶ್ರದ್ಧೆಯಿಂದ ಕೆಲಸ ಮಾಡಿದರು ಕೂಡಾ ಅವರಿಗೆ ಸಮಾಧಾನ ಆಗುವುದಿಲ್ಲ ಅದೆ ಅವರಿಗೆ ಗಂಡಸರು ಮೋಸ ಮಾಡಿ ಸುಳ್ಳು ಹೇಳಿದರೂ ಕೂಡಾ ಅವರಿಗೆ ಅದೆ ವೇದ ವಾಕ್ಯ, ಅಂದರೆ ನಂಬುತ್ತಾರೆ. ನಾವು ಒಳ್ಳೆಯ ಮನೋಭಾವದಿಂದ ಇನ್ನೊಂದು ಸಾರಿ ನಮ್ಮ ಹತ್ತಿರ ಗಾಡಿ ತರಬೇಕು ಎಂದು ಚೆನ್ನಾಗಿ ಮಾಡಿದರೆ ಅವರಿಗೆ ನಂಬಿಕೆ ಇಲ್ಲ. ಈ ಬೋಲ್ಟು ಟೈಟ್ ಮಾಡಿದಿರಾ, ವಿಲ್ಸ ಟೈಯಿಟ್ ಮಾಡಿದಿರಾ ಮತ್ತೆ ಎಲ್ಲಾ ಸರಿಯಾಗಿ ಕೆಲಸ ಮಾಡಿದಿರಾ ಎಂದು ನೂರಾ ಎಂಟು ಪ್ರಶ್ನೆಗಳ ಸುರಿ ಮಳೆಯ ಹಾಕಿ ಬಿಡುತ್ತಾರೆ. ಅದೆ ಮ್ಯಾಕ್ಯಾನಿಕ್ (ಗಂಡಸು) ಏನು ಕೆಲಸ ಮಾಡದೆ ಸುಮ್ಮನೆ ಗಾಡಿ ಒರೆಸಿ ಕೊಟ್ಟರೆ ಅವರು ಕೇಳಿದಷ್ಟು ಬೆಲೆ ಕೊಟ್ಟು ಗಾಡಿ ತೆಗೆದು ಕೊಂಡು ಹೋಗುತ್ತಾರೆ ಎಲ್ಲಾ ಕಡೆಯು ಒಂದೊಂದು ರೀತಿ ದೌರ್ಜನ್ಯ ಆದರೆ ಇಲ್ಲಿ ಈ ರೀತಿ ದೌರ್ಜನ್ಯ ನಡೆಯುತ್ತಿದೆ. ಆದರೆ ಬೆರಳ ಎಣಿಕೆಯಷ್ಟು ಜನ, ಮಹಿಳೆಯರನ್ನು ಒಳ್ಳೆಯ ಮನೋಭಾವದಿಂದ ನೋಡುತ್ತಾರೆ. ಆದರೆ ಎಷ್ಟೆ ಕಷ್ಟ ಬಂದರು ನಾವು ಇದನ್ನು ಇಲ್ಲಿಗೆ ಬಿಡುವುದಿಲ್ಲ ಒಂದಲ್ಲಾ ಒಂದು ದಿನ ನಮ್ಮ ಕೆಲಸದ ಶ್ರದ್ಧೆಯನ್ನು ಅವರಿಗೆ ಮನವರಿಕೆ ಮಾಡಿಯೇ ಮಾಡುತ್ತೆವೇ. ಇದೆ ಸಖಿ ಮೋಟರ್ಸ್ ಗುರಿ ಮತ್ತು ನಮ್ಮೆಲ್ಲರ ಉದ್ದೇಶವಾಗಿದೆ.

**ಕಮಲ**

**ಕೆ.ಜಿ.ಎ.ಆರ್.ರೋಡ್**

**ಆಸ್ಟಿನ್ ಟೌನ್, ಬೆಂಗಳೂರು – 47**

**ಫೋನ್ : 25565124**

# ನಗರದಲ್ಲಿ ಒಂಟಿಯಾಗಿ

ವೃತ್ತಿಯಿಂದ ವಕೀಲರಾದ ಅನುಜ ಅವರು, ಪರ್ಯಾಯ ಕಾನೂನಿನ ಬಗ್ಗೆ ಕಾಳಜಿಯುಳ್ಳ ' Alternative Law Forum' ನಲ್ಲಿ ಕೆಲಸ ಮಾಡುತ್ತಿದ್ದಾರೆ. ನಗರದಲ್ಲಿ ಒಂಟಿಯಾಗಿ ಬದುಕುತ್ತಿರುವ ಹಲವಾರು ಮಹಿಳೆಯರನ್ನು ಸಂದರ್ಶಿಸಿ ಅವರು ಬರೆದಿರುವ ಲೇಖನವನ್ನಿಲ್ಲಿ ಪ್ರಕಟಿಸಿದ್ದೇವೆ. ಒಂಟಿ ಎಂದರೆ ಸ್ವತಂತ್ರ ಎಂದೆ ? ಒಂಟಿಯಾಗಿ ಬದುಕುವುದೆಂದರೆ ಒಂದು ಸೂರಿನಡಿ ಒಬ್ಬರೆ ಬದುಕುವುದೆಂದೆ ? ಒಂಟಿ ಮಹಿಳೆ ಎಂದರೆ ವಿಧವೆಯೇ ? ವಿಚ್ಛೇದಿತಳೆ ? ಒಂಟಿಯಾಗಿ ಬದುಕಲು ಆಯ್ಕೆ ಮಾಡಿಕೊಂಡವಳೆ ? ಒಂಟಿಯಾಗಿ ಬದುಕುವುದು ಎಂದರೆ ಒಂಟಿತನದಲ್ಲಿ ಬದುಕುವುದೆಂದೆ ? ಬದಲಾಗುತ್ತಿರುವ ಸಾಮಾಜಿಕ ಪರಿಸ್ಥಿತಿಯಲ್ಲಿ ಈ ಪ್ರಶ್ನೆಗಳು ಹಲವರ ಮನಸ್ಸಿನಲ್ಲಿ ಮೂಡಬಹುದು, ಎದುರಾಗಬಹುದು. ಈ ಬಗ್ಗೆ ನಿಮ್ಮ ಅನಿಸಿಕೆಗಳನ್ನು ಬರೆದು ತಿಳಿಸಿ.

''ಭಾರತದಲ್ಲಿ ಮಹಿಳೆಯರು ಒಂಟಿಯಾಗಿ ಬದುಕುವುದಿಲ್ಲ'' ಎಂಬ ಮಾತು ಎರಡು ದಶಕಗಳ ಹಿಂದೆ ನಿಯಮವೇನೊ ಆಗಿತ್ತು. ಕಾರಣ ಆಗ ಒಂಟಿಯಾಗಿ ಬದುಕುವ ಯೋಚನೆಗೇ ನಿಷೇಧವಿತ್ತು. ಆದರೆ ಈಗ ನಗರೀಕರಣದ ದ್ವೀಪಗಳಂತಿರುವ ಮಹಾನಗರಗಳಲ್ಲಿ, ಕೆಲವು ಉದ್ಯೋಗಸ್ಥ ಮಹಿಳೆಯರು ಆ ನಿಷೇಧವನ್ನು ಮುರಿಯುವತ್ತ ಹೆಜ್ಜೆ ಹಾಕಿರುವುದು ಅವರ ವ್ಯಕ್ತಿತ್ವವನ್ನು ಸ್ಪಷ್ಟ ಪಡಿಸುತ್ತದೆ. ಪರಿಸ್ಥಿತಿಗನುಗುಣವಾಗಿಯೋ ಅಥವಾ ಸ್ವಇಚ್ಛೆಯಿಂದಲೊ ಒಂಟಿ ಉದ್ಯೋಗಸ್ಥ ಮಹಿಳೆಯರು ಸ್ವತಂತ್ರವಾಗಿ ಬದುಕುವ ಆಯ್ಕೆ ಮಾಡಿಕೊಂಡಿದ್ದಾರೆ. ಒಂಟಿಯಾಗಿ ಬದುಕುವ ಉದ್ಯೋಗಸ್ಥ ಮಹಿಳೆಯರಿಗೆ ಬೆಂಗಳೂರು ಹೆಚ್ಚು ಅನುಕೂಲಕರವಾಗಿದೆ ಎಂದು ಪರಿಗಣಿಸಲಾಗಿದೆ.

ಮಹಿಳೆಯರು ಹೊರಬರುವುದೇಕೆ ? ಮಾರಾಟ ವಿಭಾಗದ ಹಿರಿಯ ಮ್ಯಾನೇಜರ್ ಆಗಿರುವ ಮಾಯ (ಎಲ್ಲಾ ಹೆಸರುಗಳನ್ನು ಬದಲಾಯಿಸಲಾಗಿದೆ) ಅವರ ಪ್ರಕಾರ - ಕುಟುಂಬದಲ್ಲಾದರೆ ಇತರರಿಗೆ ಅನುಗುಣವಾಗಿ ಸಮಯವನ್ನು ನಿರ್ವಹಿಸಬೇಕಾಗುತ್ತದೆ. ಅವರವರ ಸಮಯವನ್ನು ಅವರವರಿಗನು।ಗುಣವಾಗಿ ನಿರ್ವಹಿಸುವ ಅವಕಾಶವಿರಬೇಕು. ನನ್ನ ಕುಟುಂಬದಲ್ಲಿ ಇತರರು ನನಗನುಗುಣವಾಗಿ ಸಮಯವನ್ನು ವ್ಯವಸ್ಥೆ ಮಾಡಿಕೊಳ್ಳುತ್ತಿದ್ದರು'' ಎಲ್ಲರಿಗೂ ದಿನದಲ್ಲಿರುವುದು ಕೇವಲ 24 ಗಂಟೆಗಳು ಮಾತ್ರ'' ಎನ್ನುವ ಮಾಯಾರವರಿಗೆ ಒಂಟಿಯಾಗಿ ಬದುಕುವುದರಿಂದ ಹೆಚ್ಚು ವ್ಯವಸ್ಥಿತವಾಗಿರಲು, ಸಮಯವನ್ನು ನಿಯಂತ್ರಿಸಲು ಸಾಧ್ಯವಾಗಿದೆ.

28 ವರ್ಷದ ಅಮೃತಾಳಿಗಾದರೆ ಒಂಟಿಯಾಗಿ ಬದುಕಬೇಕೆನ್ನುವುದು ಸ್ವಾತಂತ್ರ್ಯದ ಸಲುವಾಗಿ. ವೃತ್ತಿಯಲ್ಲಿ ವಕೀಲರಾಗಿರುವ ಅಮೃತಾ ಮಂಗಳೂರಿನವರಾಗಿದ್ದು ಕಳೆದ ಐದು ವರ್ಷಗಳಿಂದ ಬೆಂಗಳೂರಿನಲ್ಲಿದ್ದಾರೆ. ತನಗೆ ಸಾಧ್ಯವಾದುದನ್ನು ಮಾಡಲು, ತನಗನಿಸಿದ ಕಡೆ ಹೋಗಲು ಯಾರ ಅನುಮತಿಯನ್ನು ಕೇಳಬೇಕಾಗಿಲ್ಲ ಎನ್ನುತ್ತಾರೆ ಅಮೃತಾ. ಇದೇ ಅಭಿಪ್ರಾಯ ವಕೀಲರಾಗಿರುವ 31 ವರ್ಷವಯಸ್ಸಿನ ಗಾಯತ್ರಿಯವರದು. ಆಕೆಯ ಪ್ರಕಾರ ಕುಟುಂಬದಿಂದ ದೂರವಿರುವುದರಿಂದ ಹೆಚ್ಚಿನ ವಿವರಣೆ ನೀಡುವ ಅಗತ್ಯವಿಲ್ಲ ಯಾಕೆಂದರೆ ''ಗೊತ್ತಿಲ್ಲದಿರುವುದನ್ನು ಅವರು ಕೇಳಲು ಹೋಗುವುದಿಲ್ಲ''

ಕುಟುಂಬ ಹಾಗು ಕೆಲಸದ ನಡುವೆ ಸಮತೋಲನ ಕಾಯ್ದುಕೊಳ್ಳುವುದು ಸುಲಭವಲ್ಲ. ಉದ್ಯೋಗಸ್ಥ ಮಹಿಳೆಯರಿಗೆ ತಿಂಗಳ ಪ್ರಾರಂಭದ ದಿನಗಳು ತ್ರಾಸದಾಯಕ. ವೇತನದ ಚೆಕ್ ಇನ್ನೂ ಬಂದಿರುವುದಿಲ್ಲ ಬಿಲ್ಲುಗಳನ್ನು ಪಾವತಿಸಬೇಕಾಗಿರುತ್ತದೆ, ಇದರೊಟ್ಟಿಗೆ ಗಾಡಿ ರಿಪೇರಿ ಮಾಡಿಸುವ ಅಥವಾ ಇನ್ನಾವುದೊ ಮನೆಯ ವಸ್ತುವನ್ನು ರಿಪೇರಿ ಮಾಡಿಸುವ ಸಮಸ್ಯೆಯೂ ಸೇರಿಕೊಂಡರೆ ತಲೆಬೇನೆ ಹೆಚ್ಚು. ಇಂತಹ ಸಮಸ್ಯೆ ತಲೆದೋರಿದಾಗ ಪರಿಹರಿಸಿಕೊಳ್ಳುವ ಪ್ರಾವಿಣ್ಯತೆಯಾಗಲಿ ಅಥವಾ ಸಮಯವಾಗಲಿ ಇರುವುದಿಲ್ಲ. ಬೆಳೆಯುತ್ತಿರುವಾಗ ಅಂತಹ ಸಮಸ್ಯೆಯನ್ನು ಬೇರೆಯವರು ನೋಡಿಕೊಳ್ಳುತ್ತಿದ್ದರು, ಈಗ ಅಂತಹ ಸಂದರ್ಭದಲ್ಲಿ ಮೋಸ ಹೋಗುವ ಸಾಧ್ಯತೆ ಹೆಚ್ಚು ಎನ್ನುತ್ತಾರೆ ಮಾಯ ಮಾರ್ಕೇಟಿಂಗ್ ಮ್ಯಾನೇಜರ್ ಹಾಗು ರಂಗಕರ್ಮಿಯಾಗಿರುವ ವಿನಿತ 15 ವರ್ಷಗಳಿಂದ ಸ್ವತಂತ್ರವಾಗಿ ಬದುಕುತ್ತಿದ್ದಾರೆ. ಆಕೆಯ ಪ್ರಕಾರ - ಮನೆ ನಡೆಸುವ ಸಂಪೂರ್ಣ ಜವಾಬ್ದಾರಿಯನ್ನು ನೀವೆ ಹೊರಬೇಕಾಗುತ್ತದೆ, ನಿಮಗಿರುವುದು ಒಂದೇ ಜೊತೆ ಕೈ, ಒಂದು ಮನಸ್ಸು.....ಸಲಹೆ ನೀಡಲು ಯಾರಿರುವುದಿಲ್ಲ.

ಸಾಹಿತಿ, ರಂಗಕರ್ಮಿ, ಸಾಮಾಜಿಕ ಕಾರ್ಯಕರ್ತೆಯಾಗಿರುವ ಸ್ನೇಹಿತೆಯೊಬ್ಬರು ಕಳೆದ 4 ವರ್ಷಗಳಿಂದ ಬೆಂಗಳೂರಿನಲ್ಲಿ ವಾಸಿಸುತ್ತಿದ್ದಾರೆ. ಆಕೆ ಗುರುತಿಸಿರುವಂತೆ ಒಂಟಿಯಾಗಿ ಬದುಕುವ ಅನುಭವವನ್ನು ವರ್ಗದ ಹಿನ್ನೆಲೆಯಲ್ಲೂ ನೋಡಬೇಕು.

ಒಂಟಿಯಾಗಿ ಬದುಕುವ ಸವಾಲು ಮಧ್ಯಮ ವರ್ಗದ ಮಹಿಳೆಗೆ, ಶ್ರೀಮಂತ ಮಹಿಳೆಗೆ ಬೇರೆಯಾಗಿರುತ್ತದೆ. ಅಡುಗೆ ಮಾಡಿಕೊಳ್ಳುವುದರಿಂದ ಹಿಡಿದು ಕ್ಯೂನಿಂತು ಲೈಟ್‌ಬಿಲ್ ಕಟ್ಟುವ, ರೇಷನ್ ಕಾರ್ಡ್ ಮಾಡಿಸುವವರೆಗೂ ನೀವೇ ಮಾಡಿಕೊಳ್ಳಬೇಕು.

ಆದರೆ ಅಮೃತಾಳಿಗೆ ಈ ಎಲ್ಲಾ ನಿತ್ಯದ ಅನುಭವಗಳು ಆಶ್ರಿತಳಾಗಿ ಬದುಕುತ್ತಿದ್ದ ಮಹಿಳೆಯನ್ನು ಗಟ್ಟಿಗೊಳಿಸುತ್ತದೆ, ಹೊರಗೆ ಜಾಣೆಯಾರಾಗಿರುವುದನ್ನು, ನಿರ್ಧಾರಗಳನ್ನು ತೆಗೆದುಕೊಳ್ಳುವುದನ್ನು ಕಲಿಸುತ್ತದೆ.

ಗಾಯತ್ರಿ ಹೇಳುವಂತೆ ಹೊತ್ತಾಗಿ ಮನೆಗೆ ಬರುವುದು ಸಮಸ್ಯೆಯಾಗುತ್ತದೆ. ಕರೆದುಕೊಂಡು ಹೋಗಲು ತಂದೆಯನ್ನೋ ಅಣ್ಣನನ್ನೋ ಆಶ್ರಯಿಸುವಂತಿಲ್ಲ.

ಭಾವನಾತ್ಮಕ ನೆಲೆಯಿಂದ ನೋಡುವಾಗ ಒಂಟಿಯಾಗಿ ಬದುಕಲು ಒಂದು ಮನಸ್ಥಿತಿಯೂ ಬೇಕು. ಕಾರಣ ಒಂಟಿತನ, ಖಿನ್ನತೆಯು ಕಾಡುವ ಸಂದರ್ಭಗಳು ಬರಬಹುದು. ''ಹಾಗೇನಾಗಬೇಕಾಗಿಲ್ಲ'' ಎನ್ನುವ ಮಾಯಾ ಪ್ರಕಾರ ತನ್ನದೆ ನೆಲೆಯನ್ನು ರೂಪಿಸಿಕೊಳ್ಳುವುದು ಮತ್ತು ಸಾಮಾಜಿಕ ಕೊಡುಕೊಳ್ಳುವಿಕೆಯಿಂದ ಪಡೆದು ಕೊಳ್ಳುವುದು - ಇವೆರೆಡರ ನಡುವೆ ಸಮತೋಲನ ಕಾಯ್ದುಕೊಳ್ಳುವ ಅಗತ್ಯವಿದೆ. ನನಗೆ ಹಲವಾರು ಸ್ನೇಹಿತರಿದ್ದರೂ ಎಲ್ಲಾ ಸಮಯದಲ್ಲೂ ಅವರೊಟ್ಟಿಗಿರ ಬೇಕೆಂದೆನಿಸುವುದಿಲ್ಲ ಎನ್ನುತ್ತಾರೆ. ಆಕೆ ನೀವು ಬೆಂಗಳೂರಿನವರಾಗಿರದಿದ್ದರೆ ಖಾಯಿಲೆಯಾದಾಗ ಅಥವಾ ಭಾವನಾತ್ಮಕವಾಗಿ ನೊಂದಾಗ ಕುಟುಂಬದ ಬೆಂಬಲದಿಂದ ವಂಚಿತರಾಗುತ್ತೀರಿ ಎನ್ನುತ್ತಾರೆ ಅಮೃತ.

ಗಾಯತ್ರಿಯವರು ಹೇಳುವ ಮತ್ತೊಂದು ವಿಷಯವೆಂದರೆ ''ವಿವಾಹಿತ ಜೋಡಿಗಳ ಸಾಮಾಜಿಕ ರಚನೆಯಿಂದ ಹೊರಗುಳಿಯುತ್ತೀರಿ'' ಎಂಬುದು, ವಿವಾಹಿತರ ಮಾತುಕತೆ, ಆದ್ಯತೆಗಳೆ ಬೇರೆ ಇರುತ್ತವೆ. ಅವು ಅವರ ಮಕ್ಕಳು, ಮನೆಯ ಸುತ್ತಲೆ ಇರುತ್ತವೆ. ಒಂಟಿ ಮಹಿಳೆಯ ಅನುಭವ ಇದಕ್ಕಿಂತ ಭಿನ್ನವಾದುದು. 'ಒಂಟಿ ಮಹಿಳೆಯರ ಸಾಮಾಜಿಕ ವಲಯ ಚೆನ್ನಾಗಿದೆ ಆದರೆ ಚಿಕ್ಕದು' ಎನ್ನುತ್ತಾರೆ ವಿನುತ.

ಸ್ವತಂತ್ರವಾಗಿ ಬದುಕಬೇಕೆಂಬ ನಿರ್ಧಾರ ತೆಗೆದುಕೊಳ್ಳುವ ಉದ್ಯೋಗಸ್ಥ ಮಹಿಳೆಯರು ಪ್ರಾರಂಭದಲ್ಲಿ ಹಲವು ರೀತಿಯ ಪ್ರತಿಕ್ರಿಯೆಯನ್ನೆದುರಿಸಬೇಕಾಗುತ್ತದೆ. '' ಒಂಟಿಯಾಗಿ ಬದುಕುವುದು ಕೆಟ್ಟದು'' ಸಂಬಂಧಿಕರು ಮನೆಯವರನ್ನು ಅವಳೆನಾದರು 'ತಪ್ಪು' ಮಾಡಿದರೆ ? ಎಂಬ ಪ್ರಶ್ನೆ ಕೇಳಬಹುದು. ನಾನು ಸ್ವತಂತ್ರವಾಗಿ ಬದುಕುವುದು ಪ್ರಾರಂಭದಲ್ಲಿ ಹಲವರಿಗೆ ಆಘಾತವನ್ನುಂಟು ಮಾಡಿತ್ತು. ಮಾಮೂಲಿಯಾಗಿ ನನ್ನನ್ನು ವಿಚಿತ್ರವಾಗಿ ಪರಿಗಣಿಸುತ್ತಿದ್ದರು ಎನ್ನುತ್ತಾರೆ ಮಾಯ. ಬಹಳಷ್ಟು ಜನರು ಮಹಿಳೆಯರಿಗೆ ಒಂಟಿಯಾಗಿ ಬದುಕುವ ಕಾರಣಗಳೇ ಇಲ್ಲ ಎಂದು ಪರಿಗಣಿಸುತ್ತಾರೆ ಎಂಬುದು ವಿನಿತಾರ ಅಭಿಪ್ರಾಯ.

ಸಾಮಾಜಿಕ ಕಾರ್ಯಕರ್ತೆಯಾಗಿರುವ ಸ್ನೇಹಿತೆಯೊಬ್ಬರು ಹೇಳುತ್ತಾರೆ ಪುರುಷರೊಂದಿಗೆ ಒಡನಾಡುವ ಸಂದರ್ಭ ಹೆಚ್ಚಿರುವುದರಿಂದ ಹೆಚ್ಚು ಜಾಗರೂಕಳಾಗಿರಬೇಕಾಗುತ್ತದೆ. image ಉಳಿಸಿಕೊಳ್ಳುವ ಸಲುವಾಗಿ 'ಸುಲಭವಾಗಿ ಸಿಗುವವಳಲ್ಲ' ಎಂಬ ಸಂಕೇತವನ್ನು ಯಾವಾಗಲೂ ಕೊಡುತ್ತಿರಬೇಕು. ಸ್ವೇಚ್ಛಾಚಾರಿಯಲ್ಲ ಎಂಬುದನ್ನು ಸಾಬೀತು ಪಡಿಸಲು ಅನಗತ್ಯವಾಗಿ ಕಠೋರವಾಗಿಯೂ ವರ್ತಿಸಬೇಕಾಗುತ್ತದೆ. ಆಕೆಯ ಪ್ರಕಾರ ಒಂಟಿಯಾಗಿ ಬದುಕುವುದು ಕೆಟ್ಟ ಪರಿಣಾಮವನ್ನು ಬೀರುತ್ತದೆ. ನಿಮ್ಮ ಬದುಕಿಗೆ ನೀವೇ ನಿಯಂತ್ರಕರಾಗುವುದು ಮತ್ತು ಎಲ್ಲವನ್ನು ನೀವೆ ಮಾಡಿಕೊಳ್ಳುವುದು ತುಂಬಾ individualistic ಮಾಡಿಬಿಡಬಹುದು. ಇದು ಸ್ವಾರ್ಥದ ಮಟ್ಟಕ್ಕೂ ಹೋಗಬಹುದು. ಹಂಚಿಕೊಂಡು ಬದುಕುವ ಸಮಷ್ಟಿ ಜೀವನವನ್ನು ವೈಯಕ್ತಿಕವಾಗಿ ನಂಬುವ ಆಕೆಗೆ ಹಂಚಿಕೊಂಡು ಬದುಕುವುದು ಕುಟುಂಬಕ್ಕಷ್ಟೆ ಸೀಮಿತವಾಗ ಬೇಕಿಲ್ಲ, ಸ್ನೇಹಿತರು, ನೆರೆಹೊರೆಯವರನ್ನು ಒಳಗೊಳ್ಳ ಬೇಕು. ನಿಜಕ್ಕೂ ಚಿಂತಿಸಬೇಕಾದ ವಿಷಯ.

ಹೊರ ಬರಲಿಚ್ಚಿಸುವ ಯುವತಿಯರಿಗೆ ಈ ಅನುಭವಗಳು ಅನುಕರಣನೀಯವೆ? ಹಲವಾರು ವರ್ಷಗಳಿಂದ ಒಂಟಿಯಾಗಿ ಬದುಕುತ್ತಿರುವವರ ಸಲಹೆ ಎಂದರೆ : ಯಾಕೆ ಹೊರಬರ ಬೇಕೆಂದುದನ್ನು ಮೊದಲು ನಿರ್ಧರಿಸಿ, ಏನ್ನನ್ನು ಜೀವನದ ಗುರಿ ಎಂದು ನೋಡುತ್ತೀರಿ ? ಜವಾಬ್ದಾರಿ ಹೊರಬಲ್ಲಿರಾ ? ಎಂಬುದನ್ನು ಯೋಚಿಸಿ ಸಂದರ್ಶನ ಮಾಡಿದ ತರುಣಿಯರು ನೀಡುವ ಎಚ್ಚರಿಕೆ ಹಣಕಾಸಿನ ಪರಿಸ್ಥಿತಿ ನೋಡಿಕೊಂಡು, ಒಂಟಿಯಾಗಿ ಬದುಕುವ ಸಾಧ್ಯತೆಗಳನ್ನು ನೋಡಿಕೊಂಡು ಮುಂದುವರೆಯಿರಿ.

**- ಅನುಜ ಮಿರ್‌ಚಂದಾನಿ**

# ಕೂಲಿ ಅಕ್ಕನ ಗ್ರಂಥಾಲಯ ಸೇವೆ

ಲಕ್ಷ್ಮಮ್ಮ ಜನಘಟ್ಟದ ಲೇಟ್ ಹನುಮಂತಪ್ಪ ಹಾಗೂ ಮುನಿಯಮ್ಮನವರ ಮೊದಲ ಮಗಳು. ಬೀರಮಾನಹಳ್ಳಿಯಲ್ಲಿ ಶಾಲೆಗೆ ಹೋಗುವ ಭಾಗ್ಯ ಕಳೆದುಕೊಂಡು ಹೆತ್ತ ತಾಯಿಯ ಜೊತೆ ಕೂಲಿ ಮಾಡಿ, ಬಾವಿಗಳ ಮಣ್ಣು ಹೊತ್ತು, ಒಪ್ಪತ್ತಿನ ಕೂಳಿಗಾಗಿ ಬಡತನದಲ್ಲಿ ಬೆಂದವಳು. ಕೋಲಾರದಲ್ಲಿ ಕಾಲೇಜು ಓದುತ್ತಿದ್ದ ನನಗೆ ಕೂಲಿಯ ಹಣ ಕಳುಹಿಸಿ ಚೆನ್ನಾಗಿ ಓದಲು ಉತ್ತೇಜನ ಕೊಟ್ಟವಳು. ಊರಿನಲ್ಲಿನ ಸ್ವಂತ ನೆಂಟರಿಷ್ಟರ ಬಿಟ್ಟಿ (ಪುಕ್ಕಟೆ) ಚಾಕರಿಗಳ ಮಧ್ಯೆ ಬೆಳೆದು ದೊಡ್ಡವಳಾದವಳನ್ನು ಹಿರಿಯರ ತೀರ್ಮಾನದಂತೆ ಬಂಗಾರಪೇಟೆ ತಾಲ್ಲೂಕು ಬಲುವನಹಳ್ಳಿಯ ನ್ಯಾತಪ್ಪನಿಗೆ ಕೊಟ್ಟು ಮದುವೆ ಮಾಡಿದರು.

ನನ್ನ ಅಕ್ಕನ ಮದುವೆಯ ನಂತರದಲ್ಲಿ ಕೂಲಿ ಮಾಡುತ್ತಿದ್ದ ಗಂಡ ಕೋಲಾರದ ಹತ್ತಿರದ ಗದ್ದೆಕಣ್ಣೂರಿನ ಬಾವಿ ಕೆಲಸದಲ್ಲಿ ಕರೆಂಟ್ ಶಾಕ್‌ನಿಂದ ಸಾವು ಅಪ್ಪಿದಾಗ, ಗಂಡನನ್ನು ಕಳೆದುಕೊಂಡು ಮದುವೆಯಾದ ನಾಲ್ಕೆ ವರ್ಷದಲ್ಲಿ ಒಡಲಾಳದ ಕಣ್ಣೀರಿನಲ್ಲಿ ನಲುಗಿ ವಿಧವೆಯ ಪಟ್ಟ ಕಟ್ಟಿಕೊಂಡು ಮತ್ತೆ ಬೀರಮಾನಹಳ್ಳಿ ಸೇರಿದಳು. ಮಕ್ಕಳಿಲ್ಲದ ನನ್ನ ಅಕ್ಕ ಮರುಮದುವೆಗೆ ಒಪ್ಪದೇ ತಾಯಿಯ ಜೊತೆ ಕೂಲಿ ಮಾಡುತ್ತ ಇರಲು ಸ್ಮತಿಸಿದಳು. ಈ ಮಧ್ಯೆ ಸರ್ಕಾರದಿಂದ ಒಂದು ಮನೆ ನನ್ನ ಅಕ್ಕನಿಗೆ ಕಟ್ಟಿ ಕೊಡಲಾಯಿತು.

ಈ ಸಂದರ್ಭದಲ್ಲಿ ಹಳ್ಳಿಯ ಸಂಘ-ಸಂಸ್ಥೆಗಳು ಇದ್ದರೂ, ಕೆಲಸ ಮಾಡದೆ ಮೂಲೆ ಗುಂಪಾಗಿದ್ದವು. ನಿಡುಮಾಮಿಡಿ ಮಠದ ವೀರಭದ್ರ ಚೆನ್ನಮಲ್ಲ ಸ್ವಾಮಿಗಳು "ಶಾಲೆ - ಆಸ್ಪತ್ರೆ - ಗ್ರಂಥಾಲಯ" ತೆರೆದು ಸಮಾಜ ಸೇವೆ ಮಾಡಲು ಕರೆ ಕೊಡುತ್ತಿದ್ದರು. ರಾಮಕ್ಕ ಪದ್ಮಕ್ಕ ಸೇವಾನಿಧಿಯ ಡಾ|| ಉಮಾಪತಿಯವರು ಕರ್ನಾಟಕದಲ್ಲಿ ಗ್ರಂಥಾಲಯ ಬಳಗಗಳ ಹುಟ್ಟು ಹಾಕಿ ಗ್ರಂಥಾಲಯ ಪ್ರಾರಂಭಿಸುವ ಬಳಗಗಳಿಗೆ ಸಹಾಯ ಮಾಡುವ ಲೇಖನಗಳು ಪ್ರಕಟವಾಗತೊಡಗಿದ್ದವು. ಇದೇ ಸಂದರ್ಭದಲ್ಲಿ ಸರ್ಕಾರಿ, ಖಾಸಗಿ ಗ್ರಂಥಾಲಯಗಳಿಗೆ ಪುಸ್ತಕ ಸಹಾಯ ಕೊಡುವ ಬಗ್ಗೆ ಇನ್‌ಫೋಸಿಸ್ ಫೌಂಡೇಷನ್‌ನ ಡಾ|| ಸುಧಾಮೂರ್ತಿ ಅವರು ಹಮ್ಮಿಕೊಂಡಿರುವ ಕಾರ್ಯಗಳ ಬಗ್ಗೆ ಪತ್ರಿಕೆಗಳು ಬರೆದವು. ಜಾತಿಯ ಸಂಘ, ರಾಜಕೀಯ ಸಂಘಗಳಿಂದ ದೂರವಾಗಿ ನನ್ನ ಅಕ್ಕನ ಮನವೊಲಿಸಿ ಅಕ್ಕನ ಹೊಸ ಮನೆಯಲ್ಲಿ ಜನವರಿ ಒಂದು ೧೯೯೯ ರಂದು ೧೦ ಪುಸ್ತಕಗಳ ಭಂಡಾರದೊಂದಿಗೆ "ಗೆಳೆಯರ ಗ್ರಾಮೀಣ ಗ್ರಂಥಾಲಯ ಮತ್ತು ಸಾಂಸ್ಕೃತಿಕ ಅಭಿವೃದ್ಧಿ ಸಂಘ" ವನ್ನು ಸದ್ದುಗದ್ದಲವಿಲ್ಲದೆ ಪ್ರಾರಂಭಿಸಲಾಯಿತು. ಅನಕ್ಷರಸ್ಥಳಾದ ನನ್ನ ಅಕ್ಕ ಹತ್ತು ಜನರಿಗೆ ಜ್ಞಾನದ ಬೆಳಕು ನೀಡುವ ಗ್ರಂಥಾಲಯ ಸೇವೆಯ ಕನಸುಗಳ ಹೊತ್ತು ಮುನ್ನಡೆದಳು.

ಬೀರಮಾನಹಳ್ಳಿ ಗೆಳೆಯರ ಗ್ರಾಮೀಣ ಗ್ರಂಥಾಲಯಕೆ ರಾಮಕ್ಕ ಪದ್ಮಕ್ಕ ಸೇವಾನಿಧಿಯ ಮನ್ನಣೆಯ ಜೊತೆ, ನಿಡುಮಾಮಿಡಿ ಮಠ, ದಿವಂಗತ ಪಿ.ಲಂಕೇಶ್, ಕನ್ನಡ ಪುಸ್ತಕ ಪ್ರಾಧಿಕಾರ, ನಾಟಕ ಅಕಾಡಮಿ, ಸಂಗೀತ ಅಕಾಡಮಿ, ಜಿಲ್ಲಾ ಗ್ರಂಥಾಲಯ ಸಹಾಯಗಳ ಜೊತೆಗೆ ಲೇಖಕರು, ಕಲಾವಿದರು, ಬುದ್ಧಿಜೀವಿಗಳ ಸಹಾಯ ಮಾರ್ಗದರ್ಶನಗಳು ಕ್ರಮವಾಗಿ ಲಭಿಸತೊಡಗಿದವು.

ನನ್ನ ಅಕ್ಕ ಲಕ್ಷ್ಮಮ್ಮ ಅಲಿಯಾಸ್ ಲಕ್ಷ್ಮಕ್ಕನ ಕಾಯಕ ಬೆಳಿಗ್ಗೆ ಪತ್ರಿಕೆ ಬರುತ್ತಲೇ ಗ್ರಂಥಾಲಯ ತೆರೆದು ಕಸಗುಡಿಸಿ ಪುಸ್ತಕ ಪತ್ರಿಕೆ ಜೋಡಿಸಿ ಕುಡಿಯಲು ನೀರು ಇಟ್ಟು, 'ಗ್ರಂಥಾಲಯ ಊರಿನ ದೇವಾಲಯ ಹಾಗೂ ಸಾಂಸ್ಕೃತಿಕ ಕೇಂದ್ರ' ಕ್ಕೆ ರಂಗೋಲಿಯೊಂದಿಗೆ ಗಂಧದ ಕಡ್ಡಿ ಹಚ್ಚುತ್ತಿದ್ದಂತೆ ಆಸಕ್ತ ಓದುಗರು ಪತ್ರಿಕೆ-ಪುಸ್ತಕ ಓದಲು ತವಕದಿಂದ ಬರಲು ಪ್ರಾರಂಭ ಮತ್ತೆ ಮಧ್ಯಾಹ್ನ ಹಾಗೂ ಸಂಜೆ ಬರುವ ಅಕ್ಕ-ಪಕ್ಕದ ಊರಿನ ಓದುಗರೂ ಸೇರಿ ಪತ್ರಿಕೆ ಓದಿ, ಪುಸ್ತಕ ಬೇಕಾದವರು ಮನೆಗೂ ತೆಗೆದುಕೊಂಡು ಹೋಗುತ್ತಾರೆ.

ನನ್ನ ಅಕ್ಕನ ಸೇವೆಯ ಮಡಿಲಲ್ಲಿ ಬೆಳೆದ ಗೆಳೆಯರ ಗ್ರಾಮೀಣ ಗ್ರಂಥಾಲಯಕ್ಕೆ ಈಗ ಐದು ವರ್ಷ ತುಂಬಿದ ಸಂಭ್ರಮ. ಹತ್ತು ಜನ ಪತ್ರಿಕೆ ಓದಲು, ಹತ್ತು ಜನ ಪುಸ್ತಕ ಓದಲು ಹಾಗೂ ಮನೆಗೆ ಕೊಂಡೊಯ್ಯಲು, ಹತ್ತು ಜನ ಪ್ರಥಮ ಚಿಕಿತ್ಸೆ ಪಡೆಯಲು, ಹತ್ತು ಜನ ತಿಂಗಳ ಕಾರ್ಯಕ್ರಮಗಳಲ್ಲಿ ಭಾಗವಹಿಸಲು, ಹತ್ತು ಜನ ಮಕ್ಕಳ ಆಟದ ಸಾಮಾನುಗಳಲ್ಲಿ ಆಡಲು ಮತ್ತು ಹತ್ತು ಜನ ಸಂಗೀತ ಉಪಕರಣಗಳಲ್ಲಿ ಹಾಡುಗಳ ಕಲಿಯಲು ಬರುವುದರ ಜೊತೆಗೆ ಗ್ರಂಥಾಲಯದ ವಾಟರ್ ಫಿಲ್ಟರ್‌ನಲ್ಲಿ ಮಕ್ಕಳು ಚಂಗನೆ ಬಂದು ಗುಟುಕು ನೀರು ಕುಡಿದು ಪತ್ರಿಕೆಯ 'ಸುಭಾಷಿತಗಳ' ಬರೆದುಕೊಂಡು ಹಕ್ಕಿಯಂತೆ ಹಾರಿ ಹೋಗುತ್ತಾರೆ. ನನ್ನ ಅಕ್ಕನೂ ಸೇರಿದಂತೆ ಇಪ್ಪತ್ತು ಜನ ಎಲೆಯ ಮರೆಯ ಪ್ರತಿಭೆಗಳಿಗೆ ಇದುವರೆವಿಗೂ ಗ್ರಂಥಾಲಯ ಸನ್ಮಾನ ಮಾಡಿ ಗೌರವಿಸಿದೆ. ಶಾಲಾ ಮಕ್ಕಳಿಗೆ ಬೇಸಿಗೆ ಶಿಬಿರಗಳ ಮಾಡಿ ಆಟ-ಪಾಠ, ಸಾಂಸ್ಕೃತಿಕ, ಪ್ರತಿಭಾ ಸ್ಪರ್ಧೆಗಳ ಏರ್ಪಡಿಸಿ ಬಹುಮಾನಗಳ ನೀಡಿದೆ. ಸಂಘದ ಉತ್ಸಾಹಿ ಸದಸ್ಯರು ಜೋಳಿಗೆಗೆ ಪುಸ್ತಕಗಳನ್ನು ಹಾಕಿಕೊಂಡು ಓದುಗರ ಮನೆಯ ಬಾಗಿಲಿಗೆ ಹೋಗಿ 'ಒಂದು ಪುಸ್ತಕ ಓದಿ' ಎಂದು ಪುಸ್ತಕ ಸ್ನೇಹಿತರನ್ನು ಅರಸುತ್ತಾ, ಗ್ರಂಥಾಲಯ ಕನಸುಗಳನ್ನು ನನಸು ಮಾಡುವತ್ತ ದೃಢ ಹೆಜ್ಜೆ ಹಾಕಿದ್ದಾರೆ.

ಸಾಲುಮರದ ತಿಮ್ಮಕ್ಕನಂತೆ ನನ್ನಕ್ಕ ಕುಂಟೆಯಿಂದ ನೀರು ತಂದು ಗ್ರಂಥಾಲಯ ಆವರಣದಲ್ಲಿ ಪ್ರೀತಿಯಿಂದ ಬೆಳೆಸಿದ ಗಿಡಮರಗಳಲ್ಲಿ ಗುಬ್ಬಚ್ಚಿಗಳು ಗೂಡುಗಳನ್ನು ಕಟ್ಟಿವೆ. ಕಾಗೆಗಳು 'ಕಾವ್-ಕಾವ್' ಎಂದು ರಾಗ ತೆಗೆದು ರಾತ್ರಿ ತಂಗುತ್ತವೆ. ಕೋಗಿಲೆಗಳು ಕುಹೂ-ಕುಹೂ ರಾಗವಾಡಿವೆ. ದಣಿದು ಬಂದವರಿಗೆ ನನ್ನಕ್ಕ ಬೆಳೆಸಿದ ಮರಗಳು ತಂಪಿನ ನೆರಳು ನೀಡಿವೆ. ಅಲಂಕಾರಿಕ ಹೂಗಿಡಗಳಿಂದ ಗ್ರಂಥಾಲಯದ ಮುಂದೆ ಆಹ್ಲಾದಕರ ವಾತಾವರಣ ನಿರ್ಮಾಣವಾಗಿದೆ. ಸಾಹಿತ್ಯ ಸಂಸ್ಕೃತಿಯ ಕಂಪು ನೀಡುತ್ತಿರುವ ಗೆಳೆಯರ ಗ್ರಾಮೀಣ ಗ್ರಂಥಾಲಯದ ಬಗ್ಗೆ ಕೋಲಾರವಾಣಿ, ಹೊನ್ನುಡಿ, ಗ್ರಂಥಾಲಯ ಮಾತುಕತೆ ಪತ್ರಿಕೆಗಳು ಲೇಖನಗಳನ್ನು ಬರೆದು ಪ್ರಚಾರ ಪಡಿಸಿವೆ. ಬೀರಮಾನಹಳ್ಳಿ ಗ್ರಂಥಾಲಯ ಕಾರ್ಯಕ್ರಮಗಳಲ್ಲಿ ಅನೇಕ ಗಣ್ಯರು ಭಾಗವಹಿಸಿದ್ದಾರೆ.

ಹೀಗೆ ಬೀರಮಾನಹಳ್ಳಿಯ ಗೆಳೆಯರ ಗ್ರಾಮೀಣ ಗ್ರಂಥಾಲಯ ಆಶ್ರಮದಂತೆ, ದೇವಾಲಯದಂತೆ, ರೂಪುಗೊಂಡು 'ಗ್ರಂಥಾಲಯ ಬರೀ ಪುಸ್ತಕ ಪತ್ರಿಕೆ ಓದುವ ಸ್ಥಳವಲ್ಲ, ಬದುಕಿನ ಎಲ್ಲ ಚಟುವಟಿಕೆಗಳ ಕೂಡಲ ಸಂಗಮ' ಎನ್ನುವುದನ್ನು ಸಾಕಾರಗೊಳಿಸಿ ಗ್ರಂಥಾಲಯವನ್ನು ಸರ್ವರಿಗೂ ಉಪಯುಕ್ತವಾಗುವಂತೆ ಬಹುಮುಖಿ ಚಟುವಟಿಕೆಗಳಿಂದ ಸಮಾಜೋಪಯೋಗಿಯಾಗಿಸಿದೆ. ಇದಕ್ಕೆಲ್ಲ ಕಾರಣ ನನ್ನ ವಿಧವೆ ಕೂಲಿ ಅಕ್ಕನು ಸಮಾಜಕ್ಕೆ ನಿಸ್ವಾರ್ಥ ಕಾಯಕ ಮನೋಭಾವದಿಂದ ಸಮರ್ಪಿಸಿರುವ ಉಚಿತ ಗ್ರಂಥಾಲಯ ಸೇವೆ.

-ಬೀರಮಾನಹಳ್ಳಿ ರಾಮಕೃಷ್ಣ

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 100 ರೂ**

**ಸಂಸ್ಥೆಗಳಿಗೆ : 150 ರೂ**

9449060903

ಸಂ.ಮಂಡಳಿ

REGD No. : CPMG/KA/BGE/289/2003 - 05

BOOK-POST
PRINTED MATTER

ವಿಳಾಸ :
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067